KA / BG-GPO / 2515 / WPP-47 / 2006-2008



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು



| ಸಂಪುಟ ೧೪೧ | ಬೆಂಗಳೂರು, ಗುರುವಾರ, ಜೂನ್ ೮, ೨೦೦೬ (ಜೇಷ್ಠ ೧೮, ಶಕ ವರ್ಷ ೧೯೨೮) | ಸಂಚಿಕೆ ೨೩ |
|---|---|---|



## ಭಾಗ - ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾಗಿ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಕಂದಾಯ ಸಚಿವಾಲಯ

**ವಿಷಯ:** ಶ್ರೀ ಎನ್.ಜಿ.ಹಾವನೂರು, ಜಿಲ್ಲಾ ನೋಂದಣಾಧಿಕಾರಿಗಳು (ನಿವೃತ್ತಿ) ಇವರಿಗೆ ದಂಡನೆ ವಿಧಿಸುವ ಬಗ್ಗೆ.

**ಓದಲಾಗಿದೆ:**
1) ಸರ್ಕಾರಿ ಆದೇಶ ಸಂಖ್ಯೆ: ಕಂಇ 336 ಇಸೇವಿ 94 (ಭಾಗ), ದಿನಾಂಕ: 29.05.1995.
2) ಸರ್ಕಾರಿ ಆದೇಶ ಸಂಖ್ಯೆ: ಕಂಇ 336 ಇಸೇವಿ 94(ಭಾಗ), ದಿನಾಂಕ:10.06.2002.
3) ಸರ್ಕಾರಿ ಆದೇಶ ಸಂಖ್ಯೆ: ಕಂಇ 336 ಇಸೇವಿ 94(ಭಾಗ), ದಿನಾಂಕ:12.01.2004.
4) ವಿಚಾರಣಾಧಿಕಾರಿಗಳ ವರದಿ ದಿನಾಂಕ:20/22.06.2004.
5) ಸರ್ಕಾರಿ ಪತ್ರ ಸಂಖ್ಯೆ: ಕಂಇ 336 ಇಸೇವಿ 94 (ಭಾ-1) ದಿನಾಂಕ:02.12.2005.
6) ಕರ್ನಾಟಕ ಲೋಕ ಸೇವಾ ಆಯೋಗದ ಪತ್ರ ಸಂಖ್ಯೆ: ಪಿಎಸ್‌ಸಿ 175 ಸಿಎನ್‌ಎಸ್ 05, ದಿನಾಂಕ:25.02.2006.

**ಪ್ರಸ್ತಾವನೆ:**

ಮೇಲೆ (1) ರಲ್ಲಿ ಓದಲಾದ ದಿನಾಂಕ: 29.05.1995 ರ ಸರ್ಕಾರಿ ಆದೇಶದಲ್ಲಿ ನೋಂದಣಿ ಮತ್ತು ಮುದ್ರಾಂಕ ಇಲಾಖೆಯ ಅಧೀನ ಕಛೇರಿಯಾದ ಚಿಕ್ಕಮಗಳೂರು ಜಿಲ್ಲಾ ನೋಂದಣಿ ಕಛೇರಿಯನ್ನು 1993-94 ರ ಸಾಲಿನಲ್ಲಿ ತಪಾಸಣೆ ಮಾಡಿದ ಸಂದರ್ಭದಲ್ಲಿ ಶಾಶ್ವತವಾಗಿ ಕಾಪಾಡಬೇಕಾದ, ಯಾವ ಕಾಲಕ್ಕೂ ನಾಶ ಮಾಡಬಾರದ, ಮಹತ್ವದ ದಾಖಲೆಗಳಾದ, ಮೊಹರು ಮಾಡಿದ ವಿಲ್‌ಗಳನ್ನು ಒಳಗೊಂಡ ಲಕೋಟೆಗಳನ್ನು ನಾಶ ಮಾಡಿ ನೋಂದಣಿ ಕಾಯ್ದೆ, 1908 ರ ಕಲಂ 43 ಮತ್ತು 85 ಹಾಗೂ ಕರ್ನಾಟಕ ನೋಂದಣಿ ನಿಯಮಗಳು, 1965 ರ ನಿಯಮ 20ಒ5 ಮತ್ತು 220ಗಳನ್ನು ಉಲ್ಲಂಘನೆ ಮಾಡಿ, ಸಂಬಂಧಿಸಿದ ಸಾರ್ವಜನಿಕರಿಗೆ ನಷ್ಟ ಉಂಟು ಮಾಡಿರುವುದರಿಂದ ಸದರಿ ಅಧಿಕಾರಿ ಒಳಗೊಂಡಂತೆ ಮತ್ತಿತರರ ವಿರುದ್ಧ ಕರ್ನಾಟಕ ನಾಗರೀಕ ಸೇವಾ (ಸಿಸಿಎ) ನಿಯಮಾವಳಿ, 1957 ರ ನಿಯಮ 13 ರಡಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಜಂಟಿ ಇಲಾಖಾ ವಿಚಾರಣೆಯನ್ನು ಸದರಿ ನಿಯಮ 11(2) ರಲ್ಲಿ ಓದಿಕೊಂಡಂತೆ ಶಿಸ್ತು ಕ್ರಮ ಜರುಗಿಸಲು ಆದೇಶಿಸಲಾಗಿತ್ತು ಮತ್ತು ಸರ್ಕಾರವು ಶಿಸ್ತು ಪ್ರಾಧಿಕಾರಿಯಾಗಿ ಕಾರ್ಯ ನಿರ್ವಹಿಸಿ ಸದರಿ ನಿಯಮದ ನಿಯಮ 8 ರಲ್ಲಿ ನಿರ್ದಿಷ್ಟಪಡಿಸಿರುವ ದಂಡನೆಯನ್ನು ವಿಧಿಸಲು ಅಧಿಕಾರ ಪಡೆದಿರುತ್ತದೆ.

ಮೇಲೆ (2) ರಲ್ಲಿ ಓದಲಾದ ದಿನಾಂಕ:10.06.2002 ರ ಆದೇಶದಲ್ಲಿ ಸದರಿ ಪ್ರಕರಣಕ್ಕೆ ಸಂಬಂಧಿಸಿದಂತೆ, ಇಲಾಖಾ ವಿಚಾರಣೆ ನಡೆಸಲು ಶ್ರೀ ಕೆ.ಈಶ್ವರ್ ಭಟ್, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು, ಬೆಂಗಳೂರು ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಗಿತ್ತು.

ಮೇಲೆ (3) ರಲ್ಲಿ ಓದಲಾದ ದಿನಾಂಕ:12.01.2004 ರ ಆದೇಶದಲ್ಲಿ ಸದರಿ ಪ್ರಕರಣಕ್ಕೆ ಸಂಬಂಧಿಸಿದಂತೆ, ಜಿಲ್ಲಾ ನೋಂದಣಿ ಕಛೇರಿ, ಬೆಂಗಳೂರು ನಗರ ಜಿಲ್ಲೆ ಅವರ ಕೇಂದ್ರ ಸ್ಥಾನ ಸಹಾಯಕರು (ಸಂಘ ಸಂಸ್ಥೆಗಳು) ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಲಾಗಿತ್ತು.

ಮೇಲೆ (4) ರಲ್ಲಿ ಓದಲಾದ ದಿನಾಂಕ: 20/22.06.2004 ರಲ್ಲಿ ವಿಚಾರಣಾಧಿಕಾರಿಗಳು ವಿಚಾರಣೆಯನ್ನು ನಡೆಸಿ ವಿಚಾರಣಾ ವರದಿಯನ್ನು ಸಲ್ಲಿಸಿದ್ದು, ಸದರಿ ಅಧಿಕಾರಿ ವಿರುದ್ಧದ ಆರೋಪಗಳು ರುಜುವಾತಾಗಿಲ್ಲವೆಂದು ತಿಳಿಸಿರುತ್ತಾರೆ.

ಮೇಲೆ (5) ರಲ್ಲಿ ಓದಲಾದ ದಿನಾಂಕ: 02.12.2005 ರ ಪತ್ರದಲ್ಲಿ ವಿಚಾರಣಾ ವರದಿಯನ್ನು ಒಪ್ಪದೇ ಶ್ರೀ ಎನ್.ಜಿ.ಹಾವನೂರು, ನಿವೃತ್ತ ಜಿಲ್ಲಾ ನೋಂದಣಾಧಿಕಾರಿಗಳು ಇವರು ಒಬ್ಬ ಸರ್ಕಾರಿ ಅಧಿಕಾರಿಯಾಗಿ ಕರ್ತವ್ಯ ಲೋಪ ಎಸಗಿರುವ ಕಾರಣಗಳ ಹಿನ್ನೆಲೆಯಲ್ಲಿ ಇವರು ಈಗಾಗಲೇ ನಿವೃತ್ತಿ ಹೊಂದಿರುವುದರಿಂದ ಕರ್ನಾಟಕ ನಾಗರಿಕ ಸೇವಾ ನಿಯಮಾವಳಿ, 1957 ರ ನಿಯಮ 214(1) (ಎ) ರಂತೆ ಕ್ರಮ ಕೈಗೊಳ್ಳಲು ನಿರ್ಧರಿಸಿದ್ದು, ಅದರಂತೆ ಮುಂದಿನ 5 ವರ್ಷಗಳವರೆಗೆ ಅವರ ಮಾಸಿಕ ಪಿಂಚಣಿಯಲ್ಲಿ ರೂ.100/- ರಿಂದ ರೂ.150/- ರವರೆಗೆ ಅಥವಾ ಪಿಂಚಣಿಯಲ್ಲಿ ಶೇ.5ರಷ್ಟು ಕಡಿತಗೊಳಿಸುವ ದಂಡನೆಯನ್ನು ವಿಧಿಸುವ ಕುರಿತು ಕರ್ನಾಟಕ ಲೋಕ ಸೇವಾ ಆಯೋಗದ ಸಹಮತಿಯನ್ನು ಕೋರಲಾಗಿತ್ತು.

ಮೇಲೆ (6) ರಲ್ಲಿ ಓದಲಾದ ಪತ್ರ ದಿನಾಂಕ: 25.02.2006 ರ ಪತ್ರದಲ್ಲಿ ಕರ್ನಾಟಕ ಲೋಕ ಸೇವಾ ಆಯೋಗವು ಸದರಿ ಅಧಿಕಾರಿಯವರ ಪಿಂಚಣಿಯಿಂದ ಮಾಸಿಕ ರೂ.100/- ರಂತೆ ಎರಡು ವರ್ಷಗಳವರೆಗೆ ಕಡಿತಗೊಳಿಸುವುದು ಸೂಕ್ತವೆಂದು ಅಭಿಪ್ರಾಯ ನೀಡಿರುತ್ತದೆ.

ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಕಂಇ 336 ಇಸೇವಿ 94 (ಭಾ-1), ಬೆಂಗಳೂರು, ದಿನಾಂಕ: 18ನೇ ಏಪ್ರಿಲ್ 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ನೋಂದಣಿ ಮತ್ತು ಮುದ್ರಾಂಕ ಇಲಾಖೆಯ ಅಧೀನ ಕಛೇರಿಯಾದ ಚಿಕ್ಕಮಗಳೂರು ಜಿಲ್ಲಾ ನೋಂದಣಿ ಕಛೇರಿಯನ್ನು 1993-94 ರ ಸಾಲಿನಲ್ಲಿ ತಪಾಸಣೆ ಮಾಡಿದ ಸಂದರ್ಭದಲ್ಲಿ ಶಾಶ್ವತವಾಗಿ ಕಾಪಾಡಬೇಕಾದ, ಯಾವ ಕಾಲಕ್ಕೂ ನಾಶ ಮಾಡಬಾರದ, ಮಹತ್ವದ ದಾಖಲೆಗಳಾದ, ಮೊಹರು ಮಾಡಿದ ವಿಲ್‌ಗಳನ್ನು ಒಳಗೊಂಡ ಲಕೋಟೆಗಳನ್ನು ನಾಶ ಮಾಡಿ ನೋಂದಣಿ ಕಾಯ್ದೆ, 1908 ರ ಕಲಂ 43 ಮತ್ತು 85 ಹಾಗೂ ಕರ್ನಾಟಕ ನೋಂದಣಿ ನಿಯಮಗಳು, 1965 ರ ನಿಯಮ 205 ಮತ್ತು 220ಗಳನ್ನು ಉಲ್ಲಂಘನೆ ಮಾಡಿ, ಸಂಬಂಧಿಸಿದ ಸಾರ್ವಜನಿಕರಿಗೆ ನಷ್ಟ ಉಂಟು ಮಾಡಿರುವುದರಿಂದ ಸದರಿ ಅಧಿಕಾರಿಯವರ ಪಿಂಚಣಿಯಿಂದ ಮಾಸಿಕ ರೂ.100/- ರಂತೆ ಎರಡು ವರ್ಷಗಳವರೆಗೆ ಕಡಿತಗೊಳಿಸುವ ದಂಡನೆಯನ್ನು ವಿಧಿಸಿ ಸರ್ಕಾರವು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ರಮೇಶ್ ಕೆ.ಜಾಗೀರ್‌ದಾರ್**

ಪಿ.ಆರ್. 772

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ನೋಂದಣಿ ಮತ್ತು ಮುದ್ರಾಂಕ)

**ವಿಷಯ:** ಶ್ರೀ ಆರ್.ಎ. ಪಾಟೀಲ, ತಹಶೀಲ್ದಾರ್ ಅಥಣಿ ತಾಲ್ಲೂಕು (ಪ್ರಸ್ತುತ ಅಮಾನತ್ತಿನಲ್ಲಿ) ಇವರನ್ನು ಅಮಾನತ್ತಿನಿಂದ ಬಿಡುಗಡೆ ಮಾಡುವ ಕುರಿತು.

**ಓದಲಾಗಿದೆ:**
1) ದಿನಾಂಕ:5-8-2005ರ ಸರ್ಕಾರಿ ಅದೇಶ ಸಂಖ್ಯೆ:ಆರ್‌ಡಿ:39:ಎಡಿಇ:2005
2) ಬೆಳಗಾವಿ ಜಿಲ್ಲಾಧಿಕಾರಿಗಳ ಪತ್ರ ಸಂಖ್ಯೆ:ಸಿಬ್ಬಂದಿ/5/ವಿವ/05-06,ದಿ: -8-05
3) ದಿನಾಂಕ:22-12-2005ರ ಕಾರಣ ಕೇಳುವ ನೋಟೀಸು ಸಂಖ್ಯೆ:ಅರ್‌ಡಿ 39 ಎಡಿಇ:05
4) ಆರ್.ಎ.ಪಾಟೀಲ,ತಹಶೀಲ್ದಾರ ರವರ ಮನವಿ ದಿ:30-9-05 ಮತ್ತು 7-1-2006

**ಪ್ರಸ್ತಾವನೆ:**

ಶ್ರೀ ಆರ್.ಎ.ಪಾಟೀಲ್,ಹಿಂದಿನ ತಹಶೀಲ್ದಾರ್,ಅಥಣಿ ತಾಲ್ಲೂಕು,ಬೆಳಗಾವಿ ಜಿಲ್ಲೆ ಇವರನ್ನು ತಾಲ್ಲೂಕಿನಲ್ಲಿ ಸಂಭವಿಸಿದ ಪ್ರವಾಹ ಸಂದರ್ಭದ ಕ್ಲಿಷ್ಟ ಸನ್ನಿವೇಶದಲ್ಲಿ ಕಾರ್ಯನಿರ್ವಾಹಕ ಕೆಲಸಗಳನ್ನು (Executive work) ಯಶಸ್ವಿಯಾಗಿ ನಿರ್ವಹಿಸದೆ ಕರ್ತವ್ಯ ಚ್ಯುತಿ ಎಸಗಿರುವುದು ಮೇಲ್ನೋಟಕ್ಕೆ ಸಾಬೀತಾಗಿದ್ದ ಕಾರಣಗಳ ಹಿನ್ನೆಲೆಯಲ್ಲಿ ಮೇಲೆ ಓದಲಾದ ಕ್ರಮ ಸಂಖ್ಯೆ(1)ರ ಅದೇಶದಲ್ಲಿ ಶ್ರೀ ಆರ್.ಎ.ಪಾಟೀಲ್,ತಹಶೀಲ್ದಾರ್,ಅಥಣಿ ಇವರ ವಿರುದ್ಧ ಇಲಾಖಾ ವಿಚಾರಣೆ ಹೂಡುವುದನ್ನು ಬಾಕಿ ಇಟ್ಟು ಅವರನ್ನು ಸೇವೆಯಿಂದ ಅಮಾನತ್ತುಗೊಳಿಸಲಾಗಿತ್ತು.

ಶ್ರೀ ಆರ್.ಎ.ಪಾಟೀಲ,ತಹಶೀಲ್ದಾರ ರವರ ಮೇಲಿನ ಆರೋಪಗಳ ಬಗ್ಗೆ ಕರಡು ದೋಷಾರೋಪಣೆ ಪಟ್ಟಿ ಅನುಬಂಧ 1ರಿಂದ 4ರವರೆಗೆ ತಯಾರಿಸಿ ಮೇಲೆ ಓದಲಾದ ಕ್ರಮ ಸಂಖ್ಯೆ: 2ರ ಪತ್ರದಲ್ಲಿ ಬೆಳಗಾಂ ಜಿಲ್ಲಾಧಿಕಾರಿಗಳು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ. ಶ್ರೀ ಆರ್.ಎ.ಪಾಟೀಲ ರವರ ಆಪಾದನೆಗಳ ಬಗ್ಗೆ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ ನಿಯಂತ್ರಣ ಮತ್ತು ಮೇಲ್ಮನವಿ)ನಿಯಮಗಳು 1957ರ 11ನೇ ನಿಯಮದ ಪ್ರಕಾರ ಇಲಾಖಾ ವಿಚಾರಣೆ ನಡೆಸಲು ಪ್ರಸ್ತಾಪಿಸಿ ದೋಷಾರೋಪಣೆ ಪಟ್ಟಿಯನ್ನು ಅನುಬಂಧ-1ರಿಂದ 4ರೊಂದಿಗೆ ಮೇಲೆ ಓದಲಾದ ಕ್ರಮ ಸಂಖ್ಯೆ: (3)ರ ರಂತೆ ನೋಟೀಸು ನೀಡಲಾಗಿತ್ತು.

ಶ್ರೀ ಅರ್.ಎ.ಪಾಟೀಲ ರವರು ಮೇಲೆ ಓದಲಾದ ಕ್ರಮ ಸಂಖ್ಯೆ (4)ರ ದಿನಾಂಕ: 30-9-2005ರಂದು ಸರ್ಕಾರಕ್ಕೆ ಸಲ್ಲಿಸಿದ ಮನವಿಯಲ್ಲಿ ತಮ್ಮ ಅನಾರೋಗ್ಯದ ಮತ್ತು ಕೌಟುಂಬಿಕ ಕಾರಣಗಳನ್ನು ವಿವರಿಸಿ ಅಮಾನತ್ತನ್ನು ತೆರವು ಗೊಳಿಸುವಂತೆ ಕೋರಿರುತ್ತಾರೆ. ಅಲ್ಲದೆ ಮೇಲೆ ಓದಲಾದ ಕ್ರಮ ಸಂಖ್ಯೆ(4)ದಿನಾಂಕ:7-1-2006ರ ಮನವಿಯಲ್ಲಿ ಸರ್ಕಾರದ ದಿ:22-12-05ರ ಕಾರಣ ಕೇಳುವ ನೋಟೀಸಿಗೆ ಲಿಖಿತ ಹೇಳಿಕೆಯನ್ನು ನೀಡಿ ತಮ್ಮ ಮೇಲಿನ ಆಪಾದನೆಗಳನ್ನು ಅಲ್ಲಗೆಳೆದಿರುತ್ತಾರೆ. ಲಿಖಿತ ಹೇಳಿಕೆ ಪರಿಶೀಲಿಸಿದ ಸರ್ಕಾರ ಮೇಲ್ನೋಟಕ್ಕೆ ಆರೋಪಗಳು ಸಾಬೀತಾಗಿರುವುದರಿಂದ ಇಲಾಖಾ ವಿಚಾರಣೆ ನಡೆಸಲು ನಿರ್ಧರಿಸಿದೆ.

ಸರ್ಕಾರವು ಈ ವಿಷಯವನ್ನು ಕೂಲಂಕಷವಾಗಿ ಪರಿಶೀಲಿಸಿ ಶ್ರೀ ಆರ್.ಎ.ಪಾಟೀಲರವರ ಅಮಾನತ್ತಿನ ಅದೇಶವನ್ನು ಮುಂದುವರಿಸುವ ಅಗತ್ಯವಿಲ್ಲವೆಂದು ಮನಗಂಡು ಅವರ ವಿರುದ್ದ ಇಲಾಖಾ ವಿಚಾರಣೆಯನ್ನು ಬಾಕಿ ಇಟ್ಟು ಅಮಾನತ್ತಿನಿಂದ ಬಿಡುಗಡೆ ಮಾಡಲು ತೀರ್ಮಾನಿಸಿ ಈ ಕೆಳಕಂಡಂತೆ ಅದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಆರ್‌ಡಿ 39 ಎಡಿಇ 2005, ಬೆಂಗಳೂರು, ದಿನಾಂಕ: 8ನೇ ಮೇ 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ ನಿಯಂತ್ರಣ ಮತ್ತು ಮೇಲ್ಮನವಿ)ನಿಯಮಾವಳಿ ನಿಯಮಗಳು 1957ರ ನಿಯಮ 10(5)(ಸಿ)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಆರ್.ಎ.ಪಾಟೀಲ ತಹಶೀಲ್ದಾರ ಇವರ ವಿರುದ್ಧದ ಇಲಾಖಾ ವಿಚಾರಣೆಯನ್ನು ಬಾಕಿ ಇಟ್ಟು ತಕ್ಷಣದಿಂದ ಜಾರಿಗೆ ಬರುವಂತೆ ಅಮಾನತ್ತಿನಿಂದ ಬಿಡುಗಡೆಗೊಳಿಸಿ ತಹಶೀಲ್ದಾರ್,ಬಾದಾಮಿ ತಾಲ್ಲೂಕು ಇಲ್ಲಿನ ಖಾಲಿ ಹುದ್ದೆಗೆ ನೇಮಕ ಮಾಡಿ ಅದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್. ಶ್ರೀಮತಿ ಚಂದ್ರಶೇಖರ್**

ಪಿ.ಆರ್. 766 ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಸೇವೆಗಳು–3)

**ಒಳಾಡಳಿತ ಸಚಿವಾಲಯ**

**ವಿಷಯ:** ಶ್ರೀ ಜಿ. ರೇವಣಸಿದ್ದಪ್ಪ, ಸಿಹೆಚ್‌ಸಿ-123, ಜಗಳೂರು ಪೊಲೀಸ್ ಠಾಣೆ, ದಾವಣಗೆರೆ ಜಿಲ್ಲೆ, ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ.

**ಓದಲಾಗಿದೆ:**
1) ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ದಾವಣಗೆರೆ ಜಿಲ್ಲೆ, ಇವರ ಆದೇಶ ಸಂಖ್ಯೆ:ಸಿಬ್ಬಂದಿ/5/ಇವಿ-6/2002-03, ಓಬಿ ಸಂಖ್ಯೆ:62/2004-05, ದಿನಾಂಕ:30-06-2004.
2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಪೂರ್ವ ವಲಯ, ದಾವಣಗೆರೆ ಇವರ ಆದೇಶ ಸಂಖ್ಯೆ:20/ಅಪೀಲು/2004-05, ಓಬಿ ಸಂಖ್ಯೆ:42/2005-06, ದಿನಾಂಕ:08-06-2005.
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:20-09-05.
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ:ಅಪೀಲು/2/118/2005, ದಿನಾಂಕ:31-12-2005.

**ಪ್ರಸ್ತಾವನೆ:**

ಶ್ರೀ ಜಿ.ರೇವಣಸಿದ್ದಪ್ಪ, ಸಿಹೆಚ್‌ಸಿ-123 ಜಿಲ್ಲಾ ವಿಶೇಷ ವಿಭಾಗ, ದಾವಣಗೆರೆ (ಹಾಲಿ ಜಗಳೂರು ಪೊಲೀಸ್ ಠಾಣೆ) ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಾವಳಿ 1965ರ ನಿಯಮ 6ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷರೋಪಣೆ:**

"1) ದಿನಾಂಕ:18-12-2001ರಂದು ಹೊರದೇಶದ ಅಂದರೆ, ಶ್ರೀಲಂಕಾದ ಪ್ರಜೆಯಾದ ಕುಮಾರಿ ಜಾನ್ಸನ್ ಫ್ಲೋರಿಡಾ ಪೆರಿಯಾರ್, ರವರು ಭಾರತವನ್ನು ಬಿಟ್ಟು ಹೋಗಬೇಕಾಗಿದ್ದು, ಆದರೆ, ಇವರು ಭಾರತವನ್ನು ಬಿಟ್ಟು ಹೋಗದೆ ಇದ್ದು, ಅವರಿಗೆ ಈ ಬಗ್ಗೆ ಯಾವುದೇ ನೊಟೀಸ್ ನೀಡಿರುವುದಿಲ್ಲ."

2) ಕು:ಜಾನ್ಸನ್ ಫ್ಲೋರಿಡಾ ಪೇರಿಯಾರ್ ರವರು ದಿನಾಂಕ:20-07-2002 ರಂದು ಕಚೇರಿಗೆ ಬಂದು, ತನಗೆ ಭಾರತವನ್ನು ಬಿಟ್ಟು ಹೋಗಲು ಹಿಂಬರಹ ನೀಡಲು ನಿಮ್ಮನ್ನು ಕಂಡಾಗ, ನೀವು ಅವರಿಗೆ ಸರಿಯಾದ ವಿವರಣೆ ನೀಡದೇ, ವಾಪಸ್ಸು ಕಳುಹಿಸಿದ್ದಲ್ಲದೆ, ಈ ವಿಷಯವನ್ನು ಪಿಎಸ್‌ಐ, ಜಿಲ್ಲಾ ವಿಶೇಷ ವಿಭಾಗ, ದಾವಣಗೆರೆ ರವರ ಗಮನಕ್ಕೆ ತಂದಿರುವುದಿಲ್ಲ.

3) ನೀವು ಸದರಿ ಕು:ಜಾನ್ಸನ್ ಫ್ಲೋರಿಡಾ ಪೇರಿಯಾರ್ ಇವರಿಂದ ಮದ್ಯದ ಬಾಟಲಿ, ಅಕ್ರಮ ಸಂಭಾವನೆ ಇತ್ಯಾದಿಗಳನ್ನು ನೀಡುವಂತೆ ಸತಾಯಿಸಿ, ಕಿರುಕುಳ ನೀಡಿ, ಕರ್ತವ್ಯದಲ್ಲಿ ಅತೀವ ದುರ್ವರ್ತನೆ ಪ್ರದರ್ಶಿಸಿದ್ದೀರಿ.

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿಲ್ಲ ಎಂದು ಸಲ್ಲಿಸಿದ ವರದಿಯ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು, ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ದಾವಣಗೆರೆ ಜಿಲ್ಲೆ, ಇವರು ಮೇಲೆ ಕ್ರಮ ಸಂಖ್ಯೆ:(1) ರಲ್ಲಿ ಓದಲಾದ ದಿನಾಂಕ:30-06-2004ರ ಆದೇಶದಲ್ಲಿ ಅರ್ಜಿದಾರರ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ಭವಿಷ್ಯದ ವೇತನ ಬಡ್ತಿಗಳ ಮೇಲೆ ಪರಿಣಾಮ ಬೀರದಂತೆ ಒಂದು ವರ್ಷದ ಅವಧಿಗೆ ಮುಂದೂಡಿದ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಪೂರ್ವ ವಲಯ, ದಾವಣಗೆರೆ ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ:(2)ರಲ್ಲಿ ಓದಲಾದ ದಿನಾಂಕ:08-06-2005ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಇಲಾಖಾ ವಿಚಾರಣೆಯಲ್ಲಿ ಆರೋಪ ಸಾಬೀತಾಗಿ-ರುವುದಿಲ್ಲವೆಂದು ವರದಿ ಸಲ್ಲಿಸಿದ್ದರೂ, ಇಲಾಖಾ ವಿಚಾರಣೆ ಸಂದರ್ಭದಲ್ಲಿ ಸಾಂದರ್ಭಿಕ ಸಾಕ್ಷಿಗಳಾದ ಸಾಕ್ಷಿ (1) (2) ಮತ್ತು (3) ರವರಿಂದ ಅರ್ಜಿದಾರರು ವಿದೇಶಿಯವರಾದ ಕು:ಜಾನ್ಸನ್ ಫ್ಲೋರೀಡಾ ಪೆರಿಯಾರ್ ರವರೊಂದಿಗೆ ಅನುಚಿತವಾಗಿ ವರ್ತಿಸಿರುವುದು ಕಂಡುಬರುತ್ತದೆ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ, ದುರ್ನಡತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದಕ್ಕೆ, ಶಿಸ್ತು ಪ್ರಾಧಿಕಾರಿ ಲಘು ಶಿಕ್ಷೆ ವಿಧಿಸಿರುತ್ತಾರೆ. ಆದ್ದರಿಂದ ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನಾ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 48 ಪೊಸಿಅ 2006 ಬೆಂಗಳೂರು, ದಿನಾಂಕ: 22ನೇ ಏಪ್ರಿಲ್ 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಜಿ.ರೇವಣಸಿದ್ದಪ್ಪ, ಸಿಹೆಚ್‌ಸಿ-123, ಜಗಳೂರು ಪೊಲೀಸ್ ಠಾಣೆ, ದಾವಣಗೆರೆ ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ದಿನಾಂಕ:20-09-2005ರ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 776

**ಸಿ. ಬಸವರಾಜು**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು).

**ಕಂದಾಯ ಸಚಿವಾಲಯ**

**ವಿಷಯ:** ಕ್ರೀಡಾ ಉತ್ತೇಜನ ಹಾಗೂ ಅಭಿವೃದ್ಧಿ ಸಹಕಾರ ನಿಯಮಿತ ಚಂದರಗಿ ಇವರಿಗೆ ಬೆಳಗಾವಿ ತಾಲ್ಲೂಕಿನ ಸಂತಿಬಸ್ತವಾಡ ಗ್ರಾಮದ ರಿ.ಸ.ನಂ.23/1 ಹಾಗೂ 23/2ರಲ್ಲಿ ಹೆಚ್ಚುವರಿ ಜಮೀನು ಮಂಜೂರು ಮಾಡುವ ಕುರಿತು.

**ಓದಲಾಗಿದೆ:** ಜಿಲ್ಲಾಧಿಕಾರಿಗಳು, ಬೆಳಗಾಂ ಇವರ ಪತ್ರಸಂಖ್ಯೆ:ಕಂಶಾ/ಭೂಸು/ವಿವ9-2006-07 ದಿನಾಂಕ 21.4.2006 ಹಾಗೂ 24.4.2004-2006.

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರದಲ್ಲಿ ಜಿಲ್ಲಾಧಿಕಾರಿಗಳು, ಬೆಳಗಾಂ ಇವರು ಮಾರ್ಕಂಡೇಯ ಜಲಾಶಯ ಯೋಜನೆಯಡಿ ಮುಳುಗಡೆಯಾಗುವ ಗ್ರಾಮಗಳ ಕುಟುಂಬಗಳ ಪುನರ್ವಸತಿ ಕಲ್ಪಿಸಲು ಬೆಳಗಾವಿ ತಾಲ್ಲೂಕಿನ ಸಂತಿಬಸ್ತವಾಡ ಗ್ರಾಮ, ರಿ.ಸ.ನಂ.23/1 ಹಾಗೂ 23/2ಗಳ ಕ್ಷೇತ್ರ 11 ಎಕರೆ 17 ಗುಂಟೆ ಜಮೀನನ್ನು ಕರ್ನಾಟಕ ಭೂಸುಧಾರಣೆ ಕಾಯಿದೆ ಕಲಂ 77(3)ರಡಿ ಸಾರ್ವಜನಿಕ ಉದ್ದೇಶಕ್ಕೆ ಕಾಯ್ದಿರಿಸಲಾಗಿತ್ತು. ಆದರೆ ಸದರಿ ಕುಟುಂಬಗಳಿಗೆ ಮಚ್ಛೇ ಗ್ರಾಮದಲ್ಲಿ ಪುನರ್ವಸತಿ ಕಲ್ಪಿಸಲಾಗಿದ್ದು ಈ ಕ್ಷೇತ್ರ ಈಗ ಖಾಲಿ ಇರುತ್ತದೆ. ಮತ್ತು ಸದರಿ ಜಮೀನು ಸರ್ಕಾರದ ಕಬ್ಜೆಯಲ್ಲಿರುತ್ತದೆ.

ಮೇಲ್ಕಾಣಿಸಿದ ಈ ಜಮೀನುಗಳು ಸಂತಿಬಸ್ತವಾಡ ಗ್ರಾಮಕ್ಕೆ ಹೊಂದಿಕೊಂಡಿದ್ದು ಸದರಿ ಜಮೀನಿನಲ್ಲಿ ಯಾವುದೇ ತರದ ಕಿಮ್ಮತ್ತಿನ ಕಟ್ಟಡಗಳಾಗಲೀ, ಮರಗಳಾಗಲೀ ಇರುವುದಿಲ್ಲ. ಈ ಜಮೀನನ್ನು ಈಗ ಮಾರ್ಕಂಡೇಯ ಜಲಾಶಯ ಯೋಜನೆಯಡಿ ಮುಳುಗಡೆಯಾಗುವ ಗ್ರಾಮಗಳ ಕುಟುಂಬಗಳ ಪುನರ್ವಸತಿಗಾಗಿ ಮೀಸಲಿಟ್ಟಿದ್ದನ್ನು ಮರಳಿ ಪಡೆದು ಕ್ರೀಡಾ ಶಾಲೆ ಚಂದರಗಿ ಇವರಿಗೆ ಮಂಜೂರು ಮಾಡಲು ಹಿರಿಯ ಉಪ ವಿಭಾಗಾಧಿಕಾರಿಗಳು ಬೆಳಗಾವಿ ಇವರು ಪ್ರಸ್ತಾವನೆ ಸಲ್ಲಿಸಿರುತ್ತಾರೆ. ಸದರಿ ಜಮೀನು ಸರ್ಕಾರಕ್ಕೆ ನಿಹಿತವಾಗಿದ್ದು, ಹಿರಿಯ ಉಪವಿಭಾಗಾಧಿಕಾರಿಗಳು, ಬೆಳಗಾವಿ ಇವರು ಸಂತಿಬಸ್ತವಾಡ ಗ್ರಾಮದಲ್ಲಿ ಪ್ರತಿ ಎಕರೆಗೆ ಜಮೀನು ಮಾರಾಟ ಮೌಲ್ಯ ಹಣವನ್ನು ನಿರೂಪಿಸಿದ್ದು, ಸದರಿ ನಿರೂಪಣೆ ಮೇರೆಗೆ ಪ್ರಸ್ತಾಪಿತ ಜಮೀನಿನ ಮೌಲ್ಯ ಪ್ರತಿ ಎಕರೆಗೆ ರೂ.48,000-00 ಎಂದು ನಿರ್ದಿಷ್ಟ ಪಡಿಸಬಹುದಾಗಿದೆ. ಮತ್ತು ಪ್ರಸ್ತಾಪಿತ ಜಮೀನಿನ ಒಟ್ಟು ಕ್ಷೇತ್ರ 11ಎಕರೆ 17 ಗುಂಟೆ ಜಮೀನು ಮಾರ್ಕಂಡೇಯ ಯೋಜನೆ ಸಂತ್ರಸ್ಥರಿಗೆ ಕಾಯ್ದಿರಿಸಿದ್ದನ್ನು ಮರಳಿ ಪಡೆದು ಕ್ರೀಡಾ ಶಾಲೆ ಚಂದರಗಿ ಇವರಿಗೆ ಮಂಜೂರು ಮಾಡಬೇಕೆಂದು ಪ್ರಸ್ತಾವನೆಯನ್ನು ಶಿಫಾರಸ್ಸು ಮಾಡಿರುತ್ತಾರೆ.

ಬೆಳಗಾವಿ ತಾಲ್ಲೂಕಿನ ಸಂತಿಬಸ್ತವಾಡ ಗ್ರಾಮದ ರಿ.ಸ.ನಂ.23/1 ಮತ್ತು 23/2 ಕ್ಷೇತ್ರ 11 ಎಕರೆ 17 ಗುಂಟೆ ಹೆಚ್ಚುವರಿ ಜಮೀನಾಗಿದ್ದು ವಿತರಣೆಗೆ ಲಭ್ಯವಿರುವುದರಿಂದ ಸದರಿ ಜಮೀನನ್ನು ಸದರಿ ಸಂಸ್ಥೆಗೆ ಮಂಜೂರು ಮಾಡಬಹುದಾಗಿ ಜಿಲ್ಲಾಧಿಕಾರಿಗಳು, ಬೆಳಗಾವಿ ಜಿಲ್ಲೆ ಇವರು ಶಿಫಾರಸ್ಸು ಮಾಡಿರುತ್ತಾರೆ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 31 ಎಲ್‌ಆರ್‌ಎಂ 2006, ಬೆಂಗಳೂರು, ದಿನಾಂಕ: 8ನೇ ಮೇ 2006**

ಹಿರಿಯ ಉಪ ವಿಭಾಗಾಧಿಕಾರಿಗಳು, ಬೆಳಗಾವಿ ಮತ್ತು ಜಿಲ್ಲಾಧಿಕಾರಿಗಳು, ಬೆಳಗಾವಿ ಜಿಲ್ಲೆ ಇವರು ಮಾಡಿರುವ ಶಿಫಾರಸ್ಸುಗಳನ್ನು ಗಣನೆಗೆ ತೆಗೆದುಕೊಂಡು ಬೆಳಗಾವಿ ತಾಲ್ಲೂಕಿನ ಸಂತಿಬಸ್ತವಾಡ ಗ್ರಾಮದ ರಿ.ಸ.ನಂ.23/1 ಮತ್ತು 23/2 ಕ್ಷೇತ್ರ 11 ಎಕರೆ 17 ಗುಂಟೆ ಹೆಚ್ಚುವರಿ ಜಮೀನನ್ನು ಕ್ರೀಡಾ ಉತ್ತೇಜನ ಹಾಗೂ ಅಭಿವೃದ್ಧಿ ಸಹಕಾರ ನಿಯಮಿತ, ಚಂದರಗಿ ಕ್ರೀಡಾ ಶಾಲೆ, ಚಂದರಗಿ, ಬೆಳಗಾವಿ ಇವರಿಗೆ ಮಂಜೂರು ಮಾಡಲಾಗಿದೆ.

ಕರ್ನಾಟಕ ಭೂಸುಧಾರಣಾ ಕಾಯಿದೆ 1961, ಕರ್ನಾಟಕ ಭೂಸುಧಾರಣಾ ನಿಯಮಗಳು 1974 ಮತ್ತು ಸರ್ಕಾರವು ಕಾಲಕಾಲಕ್ಕೆ ಹೊರಡಿಸಿರುವ ಮಾರ್ಗಸೂಚಿಗಳನ್ನು ಮತ್ತು ನಿಯಮಗಳ ಪ್ರಕಾರ ಜಿಲ್ಲಾಧಿಕಾರಿಗಳು, ಬೆಳಗಾವಿ ಜಿಲ್ಲೆ ಇವರು ಮುಂದಿನ ಕ್ರಮವನ್ನು ತೆಗೆದುಕೊಳ್ಳುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 777

**ಬಿ. ಚಿಕ್ಕರಾಜು**

ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಭೂಸುಧಾರಣೆ).

**ಸಹಕಾರ ಸಚಿವಾಲಯ**

**ವಿಷಯ:** ಪಾಂಡವಪುರ ಪಿ.ಎಸ್,ಎಸ್,ಕೆ ನೌಕರರ ಕೋ-ಅಪರೇಟೀವ್ ಬ್ಯಾಂಕ್(ನಿ)ಇದರ 2004-05ನೇ ಸಾಲಿನ ವಾರ್ಷಿಕ ಮಹಾ ಸಭೆಯನ್ನು ನಡೆಸಲು ಅವಧಿ ವಿಸ್ತರಣೆ ಬಗ್ಗೆ

**ಓದಲಾಗಿದೆ:** ಕಾರ್ಯದರ್ಶಿ ದಿ ಪಿ.ಎಸ್,ಎಸ್,ಕೆ ನೌಕರರ ಕೋ-ಅಪರೇಟೀವ್‌ಬ್ಯಾಂಕ್(ನಿ)ಪಾಂಡವಪುರ ಇವರ ಪತ್ರ ದಿನಾಂಕ:10.03.2006.

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರದಲ್ಲಿ ದಿ.ಪಿ.ಎಸ್,ಎಸ್,ಕೆ ನೌಕರರ ಕೋ-ಅಪರೇಟೀವ್ ಬ್ಯಾಂಕ್(ನಿ)ಇದರ 2004-05ನೇ ಸಾಲಿನ ವಾರ್ಷಿಕ ಮಹಾಸಭೆಯನ್ನು ದಿನಾಂಕ: 31.03.2006 ರೊಳಗೆ ನಡೆಸಬೇಕಾಗಿದ್ದು ಬ್ಯಾಂಕಿನ ಆರ್ಥಿಕ ಪರಿಸ್ಥಿತಿ

ಉತ್ತಮವಾಗಿಲ್ಲದೆ ಇರುವುದರಿಂದ ಹಾಗೂ ಬ್ಯಾಂಕಿನ ಲೆಕ್ಕಪರಿಶೋಧನೆಯನ್ನು ಕಳೆದ ನಾಲ್ಕು ವರ್ಷಗಳಿಂದಲೂ ಮಾಡಿಸಿರುವುದಿಲ್ಲವಾದ್ದರಿಂದ 2004-05ನೇ ಸಾಲಿನ ವಾರ್ಷಿಕ ಮಹಾ ಸಭೆಯನ್ನು ಸೆಪ್ಟೆಂಬರ್ 2006ರ ವರೆಗೆ ಮುಂದೂಡುವಂತೆ ದಿ/3/3/2006ರಂದು ಜರುಗಿದ ಬ್ಯಾಂಕಿನ ಆಡಳಿತಮಂಡಳಿ ಸಭೆಯಲ್ಲಿ ತೀರ್ಮಾನಿಸಿರುವುದಾಗಿ ಕಾರ್ಯದರ್ಶಿ ದಿ ಪಿ,ಎಸ್,ಎಸ್,ಕೆ ನೌಕರರ ಕೋ-ಅಪರೇಟೀವ್‌ಬ್ಯಾಂಕ್(ನಿ)ಪಾಂಡವಪುರ ರವರು ತಿಳಿಸುತ್ತಾ ಈ ಸಂಬಂಧ ಬ್ಯಾಂಕಿನ ವಾರ್ಷಿಕ ಮಹಾಸಭೆಯನ್ನು ನೆಡೆಸಲು ಸೆಪ್ಟೆಂಬರ್ 2006ರ ವರೆಗೆ ಕಾಲಾವಕಾಶ ನೀಡಬೇಕೆಂದು ಮೇಲಿನ ಪತ್ರದಲ್ಲಿ ಕೋರಿರುತ್ತಾರೆ.

ಸದರಿ ಪ್ರಸ್ತಾವೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಒ 69 ಸಿಎಲ್‌ಎಮ್ 2006, ಬೆಂಗಳೂರು, ದಿನಾಂಕ: 29ನೇ ಮಾರ್ಚ್ 2006**

ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 121ರಡಿಯಲ್ಲಿ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ, ಸರ್ಕಾರವು ಪಾಂಡವಪುರ ದಿ, ಪಿ,ಎಸ್,ಎಸ್,ಕೆ ನೌಕರರ ಕೋ-ಅಪರೇಟೀವ್ ಬ್ಯಾಂಕ್(ನಿ) ಇದರ 2004-05ನೇ ಸಾಲಿನ ವಾರ್ಷಿಕ ಮಹಾ ಸಭೆಯನ್ನು ನಡೆಸಲು ದಿನಾಂಕ:30.09.2006ರ ವರೆಗೆ ಕಾಲಾವಕಾಶ ನೀಡಲು ಅನುವಾಗುವಂತೆ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ27(1)ರ ಉಪಬಂಧಗಳು ಕೆಳಗಿನ ಮಾರ್ಪಾಟಿನೊಂದಿಗೆ ಅನ್ವಯವಾಗುತ್ತದೆಂದು ನಿರ್ದೇಶಿಸುತ್ತದೆ ಎಂದರೆ:

**27ರ ಪ್ರಕರಣದಲ್ಲಿ:**

27ನೇ ಪ್ರಕರಣ ಉಪಪ್ರಕರಣ(1)ರ ಪರಂತುಕದಲ್ಲಿನ "ಆರು ತಿಂಗಳು" ಎಂಬ ಪದಗಳಿಗೆ ಬದಲಾಗಿ "ಹನ್ನೆರಡು ತಿಂಗಳು" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

**ಸೂಚನೆ:** ಪ್ರಕರಣ27(1)ಕ್ಕೆ ಮಾಡಿದ ಈ ಮಾರ್ಪಾಡು ದಿನಾಂಕ:30.09.2006ರ ವರೆಗೆ ಜಾರಿಯಲ್ಲಿರತಕ್ಕದ್ದು. ಈ ಅವಧಿಮುಗಿದ ನಂತರ ಈ ಆದೇಶದ ಮಾರ್ಪಾಡಿಗೆ ಮೊದಲು ಜಾರಿಯಲ್ಲಿದ್ದಂತೆ ಸದರಿ 27(1)ಕ್ಕೆ ಪ್ರಕರಣದ ಉಪಬಂಧಗಳು ಪುನ:ಜಾರಿಗೆ ಬರತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎಸ್. ಹುಚ್ಚಾಚಾರಿ**

ಪಿ.ಆರ್. 780 ವಿಶೇಷ ಕರ್ತವ್ಯಾಧಿಕಾರಿ, ಸಹಕಾರ ಇಲಾಖೆ.

**ವಿಷಯ:** ಶ್ರೀ ಶ್ರೀರಾಮ ಸಹಕಾರಿ ಸಕ್ಕರೆ ಕಾರ್ಖಾನೆ (ನಿ) ಚುಂಚನಕಟ್ಟೆ, ಮೈಸೂರು ಜಿಲ್ಲೆ ಇದರ 2004-05ನೇ ಸಾಲಿನ ವಾರ್ಷಿಕ ಮಹಾಸಭೆಯನ್ನು 2007 ನೇ ಮಾರ್ಚ ರಲ್ಲಿ ನಡೆಸಲು ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959 ರ ಪ್ರಕರಣ 27(1) ರಡಿಯಲ್ಲಿ ಅನುಮತಿ ನೀಡುವ ಬಗ್ಗೆ.

**ಓದಲಾಗಿದೆ:** ಆಯುಕ್ತರು ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರ ಪತ್ರ ಸಂಖ್ಯೆ: ಡಿಎಸ್‌ಕೆ:ಇಎಸ್‌ಟಿಎಸ್:64: 2004-2005, ದಿನಾಂಕ: 16-3-2006.

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರದಲ್ಲಿ ಕಬ್ಬು ಅಭಿವೃದ್ಧಿ ಆಯುಕ್ತರು ಹಾಗೂ ಸಕ್ಕರೆ ನಿರ್ದೇಶಕರು ಶ್ರೀ ಶ್ರೀರಾಮ ಸಹಕಾರಿ ಸಕ್ಕರೆ ಕಾರ್ಖಾನೆ (ನಿ) ಚುಂಚನಕಟ್ಟೆ, ಮೈಸೂರು ಜಿಲ್ಲೆ ದಿನಾಂಕ: 22-2-2006 ರಂದು ಜಿಲ್ಲಾಧಿಕಾರಿಗಳು ಮೈಸೂರು ಜಿಲ್ಲೆ ಹಾಗೂ ಕಾರ್ಖಾನೆಯ ವಿಶೇಷಾಧಿಕಾರಿಗಳು ಇವರ ನಡವಳಿಕೆಗಳ ರಿತ್ಯಾ ಕಾರ್ಖಾನೆಯು 2005-06ನೇ ಸಾಲಿನಲ್ಲಿ ಹಣಕಾಸಿನ ಮುಗ್ಗಟ್ಟಿನಿಂದ ಕಬ್ಬು ನುರಿಸುವ ಹಠಾತ್ ಸ್ಥಗಿತವಾಗಿದೆ, ಸಿಬ್ಬಂದಿಗಳಿಗೆ 12 ತಿಂಗಳ ವೇತನ ಬಾಕಿ ಪಾವತಿಸಬೇಕಾಗಿದೆ. ಕಬ್ಬು ಸರಬರಾಜುದಾರರ ಬಾಕಿ ಮತ್ತು ನೌಕರರ ಗ್ರಾಚುಟಿ, ಭವಿಷ್ಯ ನಿಧಿ ವಂತಿಕೆ ಹಾಗೂ ಇತರೆ ಹಣವನ್ನು ಸುಮಾರು ರೂ.4.00 ಕೋಟಿ ರೂಪಾಯಿಗಳಾಗಿರುತ್ತದೆ ಅದೂ ಅಲ್ಲದೆ 2004-05 ನೇ ಆಡಿಟ್ ವರದಿಯು ಬಿಡುಗಡೆಯಾಗಿರುವುದಿಲ್ಲ. ಇಂತಹ ಪರಿಸ್ಥಿತಿಯಲ್ಲಿ ವಾರ್ಷಿಕ ಮಹಾಸಭೆ ನಡೆಸಲು ಸುಮಾರು 3 ರಿಂದ 4 ಲಕ್ಷ ರೂಪಾಯಿಗಳು ಖರ್ಚು ಭರಿಸುವುದು ಕಷ್ಟಸಾಧ್ಯ ಎಂಬುದಾಗಿ ಈ ವಾರ್ಷಿಕ ಮಹಾಸಭೆಯನ್ನು ದಿನಾಂಕ 31-3-2007 ವರೆಗೆ ಕಾಲಾವಕಾಶ ವಿಸ್ತರಿಸಬೇಕೆಂದು ಶಿಫಾರಸ್ಸು ಮಾಡಿದ್ದಾರೆ.

ಸದರಿ ಪ್ರಸ್ತಾವವನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡ ಆದೇಶ ಹೊರಡಿಸಲಾಗಿರುತ್ತದೆ.

**ಆದೇಶ ಸಂಖ್ಯೆ: ಸಇ 92 ಸಸಕಾ 2006, ಬೆಂಗಳೂರು ದಿನಾಂಕ: 19ನೇ ಏಪ್ರಿಲ್ 2006**

ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959 ರ ಪ್ರಕರಣ 121ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಶ್ರೀರಾಮ ಸಹಕಾರಿ ಸಕ್ಕರೆ ಕಾರ್ಖಾನೆ (ನಿ) ಚುಂಚನಕಟ್ಟೆ, ಮೈಸೂರು ಜಿಲ್ಲೆ ಇದರ 2004-05 ನೇ ಸಾಲಿನ ವಾರ್ಷಿಕ ಮಹಾಸಭೆಯನ್ನು ನಡೆಸಲು ದಿನಾಂಕ; 31-3-2007 ರವರೆಗೆ ಕಾಲಾವಕಾಶ ನೀಡಲು ಅನುವಾಗುವಂತೆ ಸದರಿ ಕಾರ್ಖಾನೆಗೆ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959 ರ ಪ್ರಕರಣ 27(1) ಉಪಬಂಧಗಳು ಈ ಕೆಳಗಿನ ಮಾರ್ಪಾಡುಗಳೊಂದಿಗೆ ಅನ್ವಯವಾಗುತ್ತದೆ ಎಂದು ನಿರ್ದೇಶಿಸುತ್ತದೆ. ಎಂದರೆ

**27 ರ ಪ್ರಕರಣದಲ್ಲಿ**

27 ನೇ ಪ್ರಕರಣದ ಉಪ ಪ್ರಕರಣ (1)ರ ಪರಂತುಕದಲ್ಲಿನ "**ಆರು ತಿಂಗಳು**" ಎಂಬ ಪದಗಳಿಗೆ ಬದಲಾಗಿ "**ಹದಿನೆಂಟು ತಿಂಗಳು**" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

**ಸೂಚನೆ:** ಪ್ರಕರಣ 27(1) ಕ್ಕೆ ಮಾಡಿದ ಮಾರ್ಪಾಡು ದಿನಾಂಕ 31-3-2007 ರ ವರೆಗೆ ಜಾರಿಯಲ್ಲಿರತಕ್ಕದ್ದು, ಈ ಅವಧಿ ಮುಗಿದ ನಂತರ ಈ ಆದೇಶದ ಮಾರ್ಪಾಡಿಗೆ ಮೊದಲು ಜಾರಿಯಲ್ಲಿದ್ದಂತೆ ಸದರಿ 27 (1)ಕ್ಕೆ ಪ್ರಕರಣದ ಉಪಬಂಧಗಳು ಪುನ: ಜಾರಿಗೆ ಬರತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಾಣದ ರಂಗಪ್ಪ**

ಪಿ.ಆರ್. 782 ಸರ್ಕಾರದ ಅಧೀನ ಕಾರ್ಯದರ್ಶಿ, ಸಹಕಾರ ಇಲಾಖೆ.

**ವಿಷಯ:** ಕರ್ನಾಟಕ ಸಹಕಾರಿ ಸಕ್ಕರೆ ಕಾರ್ಖಾನೆ (ನಿ) ಸಂಗೂರ್ ಹಾವೇರಿ ಜಿಲ್ಲೆ, ಇದರ 2004-05 ನೇ ಸಾಲಿನ ವಾರ್ಷಿಕ ಮಹಾಸಭೆಯನ್ನು ಮುಂದೂಡಲು ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959 ರ ಪ್ರಕರಣ 27(1) ರಡಿಯಲ್ಲಿ ಅನುಮತಿ ನೀಡುವ ಬಗ್ಗೆ.

**ಓದಲಾಗಿದೆ:** ಆಯುಕ್ತರು ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರ ಪತ್ರ ಸಂಖ್ಯೆ: ಡಿಎಸ್‌ಕೆ ಇಎಸ್‌ಟಿಎಸ್ 90 2001-2002, ದಿನಾಂಕ: 17-3-2006.

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರದಲ್ಲಿ ಕಬ್ಬು ಅಭಿವೃದ್ಧಿ ಆಯುಕ್ತರು ಹಾಗೂ ಸಕ್ಕರೆ ನಿರ್ದೇಶಕರು ಕರ್ನಾಟಕ ಸಹಕಾರಿ ಸಕ್ಕರೆ ಕಾರ್ಖಾನೆ (ನಿ) ಸಂಗೂರು, ಹಾವೇರಿ ಜಿಲ್ಲೆ ಇದಕ್ಕೆ ಹಣಕಾಸಿನ ಪರಿಸ್ಥಿತಿಯು ತೀರ ಕ್ಷೀಣವಾಗಿದ್ದು, ಅಲ್ಲದೇ ಕಾರ್ಖಾನೆಯನ್ನು ಪ್ರಾರಂಭಿಸುವ ದಿಸೆಯಲ್ಲಿ ವ್ಯಾಜ್ಯವು ಗೌರವ ಉಚ್ಚ ನ್ಯಾಯಾಲಯದಲ್ಲಿ ಇರುವುದರಿಂದ ಪ್ರಸ್ತುತ ಸಾಲಿನ ಹಂಗಾಮು ಆರಂಭವಾಗುವುದು ವಿಳಂಬವಾಗುವ ಸಾಧ್ಯತೆ ಇರುವುದರಿಂದ ಹಾಗೂ ಆ ಭಾಗದ ರೈತರ ಹಿತದೃಷ್ಟಿಯಿಂದ 2004-2005 ನೇ ಸಾಲಿನ ವಾರ್ಷಿಕ ಮಹಾಸಭೆಯನ್ನು ನಡೆಸಲು ದಿನಾಂಕ: 30-9-2006 ರವರೆಗೆ ಕಾಲಾವಕಾಶ ವಿಸ್ತರಿಸಬೇಕೆಂದು ಶಿಫಾರಸ್ಸು ಮಾಡಿದ್ದಾರೆ.

ಸದರಿ ಪ್ರಸ್ತಾವವನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡ ಆದೇಶ ಹೊರಡಿಸಲಾಗಿರುತ್ತದೆ.

**ಆದೇಶ ಸಂಖ್ಯೆ: ಸಇ 94 ಸಸಕಾ 2006, ಬೆಂಗಳೂರು ದಿನಾಂಕ: 19ನೇ ಏಪ್ರಿಲ್ 2006**

ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959 ರ ಪ್ರಕರಣ 121ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕರ್ನಾಟಕ ಸರ್ಕಾರವು ಕರ್ನಾಟಕ ಸಹಕಾರಿ ಸಕ್ಕರೆ ಕಾರ್ಖಾನೆ (ನಿ) ಸಂಗೂರ್, ಹಾವೇರಿ ಜಿಲ್ಲೆ ಇದರ 2004-05 ನೇ ಸಾಲಿನ ವಾರ್ಷಿಕ ಮಹಾಸಭೆಯನ್ನು ನಡೆಸಲು ದಿನಾಂಕ; 30-9-2006 ರೊಳಗೆ ಕಾಲಾವಕಾಶ ನೀಡಲು ಅನುವಾಗುವಂತೆ ಸದರಿ ಕಾರ್ಖಾನೆಗೆ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959 ರ ಪ್ರಕರಣ 27(1) ಉಪಬಂಧಗಳು ಈ ಕೆಳಗಿನ ಮಾರ್ಪಾಡುಗಳೊಂದಿಗೆ ಅನ್ವಯವಾಗುತ್ತದೆ ಎಂದು ನಿರ್ದೇಶಿಸುತ್ತದೆ. ಎಂದರೆ

**27 ರ ಪ್ರಕರಣದಲ್ಲಿ:**

27ನೇ ಪ್ರಕರಣದ ಉಪ ಪ್ರಕರಣ (1)ರ ಪರಂತುಕದಲ್ಲಿನ "**ಆರು ತಿಂಗಳು**" ಎಂಬ ಪದಗಳಿಗೆ ಬದಲಾಗಿ "**ಹನ್ನೆರಡು ತಿಂಗಳು**" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

**ಸೂಚನೆ:** ಪ್ರಕರಣ 27(1) ಕ್ಕೆ ಮಾಡಿದ ಮಾರ್ಪಾಡು ದಿನಾಂಕ 30-9-2006 ರ ವರೆಗೆ ಜಾರಿಯಲ್ಲಿರತಕ್ಕದ್ದು, ಈ ಅವಧಿ ಮುಗಿದ ನಂತರ ಈ ಆದೇಶದ ಮಾರ್ಪಾಡಿಗೆ ಮೊದಲು ಜಾರಿಯಲ್ಲಿದ್ದಂತೆ ಸದರಿ 27 (1)ಕ್ಕೆ ಪ್ರಕರಣದ ಉಪಬಂಧಗಳು ಪುನ: ಜಾರಿಗೆ ಬರತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಾಣದ ರಂಗಪ್ಪ**

ಪಿ.ಆರ್. 783 ಸರ್ಕಾರದ ಅಧೀನ ಕಾರ್ಯದರ್ಶಿ, ಸಹಕಾರ ಇಲಾಖೆ.

**ವಿಷಯ:** ಶ್ರೀ ಬಸವೇಶ್ವರ ಸಹಕಾರಿ ಸಕ್ಕರೆ ಕಾರ್ಖಾನೆ (ನಿ) ಕಿರಗೇರಿ, ಹಿರೆಕೆರೂರು, ಇದರ 2004-05ನೇ ಸಾಲಿನ ವಾರ್ಷಿಕ ಮಹಾಸಭೆಯನ್ನು ಮುಂದೂಡಲು ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959 ರ ಪ್ರಕರಣ 27(1) ರಡಿಯಲ್ಲಿ ಅನುಮತಿ ನೀಡುವ ಬಗ್ಗೆ.

**ಓದಲಾಗಿದೆ:** ಆಯುಕ್ತರು ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರ ಪತ್ರ ಸಂಖ್ಯೆ: ಡಿಎಸ್‌ಕೆ ಇಎಸ್‌ಟಿಎಸ್ 86 2001-2002, ದಿನಾಂಕ: 28-3-2006.

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರದಲ್ಲಿ ಕಬ್ಬು ಅಭಿವೃದ್ಧಿ ಆಯುಕ್ತರು ಹಾಗೂ ಸಕ್ಕರೆ ನಿರ್ದೇಶಕರು ಶ್ರೀ ಬಸವೇಶ್ವರ ಸಹಕಾರಿ ಸಕ್ಕರೆ ಕಾರ್ಖಾನೆ (ನಿ) ಕಿರಗೇರಿ, ಹಿರೆಕೆರೂರು ತಾಲ್ಲೂಕು, ಹಾವೇರಿ ಜಿಲ್ಲೆ ಇದಕ್ಕೆ ಸರ್ಕಾರದ ವತಿಯಿಂದ ಬಿಡುಗಡೆ ಮಾಡಬೇಕಾದ ರೂ.15.00 ಕೋಟಿ ಷೇರು ಬಂಡವಾಳವನ್ನು ಬಿಡುಗಡೆ ಮಾಡಿರುವುದಿಲ್ಲವೆಂದು ತಿಳಿಸಿ ಕಾರ್ಖಾನೆಯ ಆರ್ಥಿಕ ಹೊರೆ ಹೆಚ್ಚಾಗಿರುವುದರಿಂದ ಕಾರ್ಖಾನೆಯ ಹಿತದೃಷ್ಟಿಯಿಂದ 2004-05ನೇ ಸಾಲಿನ ಮಹಾಸಭೆಯನ್ನು ನಡೆಸಲು ದಿನಾಂಕ: 30-9-2006 ರವರೆಗೆ ಕಾಲಾವಕಾಶ ವಿಸ್ತರಿಸಬೇಕೆಂದು ಶಿಫಾರಸ್ಸು ಮಾಡಿದ್ದಾರೆ.

ಸದರಿ ಪ್ರಸ್ತಾವವನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡ ಆದೇಶ ಹೊರಡಿಸಲಾಗಿರುತ್ತದೆ.

**ಆದೇಶ ಸಂಖ್ಯೆ: ಸಇ 95 ಸಸಕಾ 2006, ಬೆಂಗಳೂರು ದಿನಾಂಕ: 19ನೇ ಏಪ್ರಿಲ್ 2006**

ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959 ರ ಪ್ರಕರಣ 121ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕರ್ನಾಟಕ ಸರ್ಕಾರವು ಶ್ರೀ ಬಸವೇಶ್ವರ ಸಹಕಾರಿ ಸಕ್ಕರೆ ಕಾರ್ಖಾನೆ (ನಿ) ಕಿರಗೇರಿ, ಹಿರೆಕೆರೂರು, ಹಾವೇರಿ ಜಿಲ್ಲೆ ಇದರ 2004-05 ನೇ ಸಾಲಿನ ವಾರ್ಷಿಕ ಮಹಾಸಭೆಯನ್ನು ನಡೆಸಲು ದಿನಾಂಕ: 30-9-2006 ರೊಳಗೆ ಕಾಲಾವಕಾಶ ನೀಡಲು ಅನುವಾಗುವಂತೆ ಸದರಿ ಕಾರ್ಖಾನೆಗೆ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959 ರ ಪ್ರಕರಣ 27(1) ಉಪಬಂಧಗಳು ಈ ಕೆಳಗಿನ ಮಾರ್ಪಾಡುಗಳೊಂದಿಗೆ ಅನ್ವಯವಾಗುತ್ತದೆ ಎಂದು ನಿರ್ದೇಶಿಸುತ್ತದೆ. ಎಂದರೆ

**27 ರ ಪ್ರಕರಣದಲ್ಲಿ**

27 ನೇ ಪ್ರಕರಣದ ಉಪ ಪ್ರಕರಣ (1)ರ ಪರಂತುಕದಲ್ಲಿನ "**ಆರು ತಿಂಗಳು**" ಎಂಬ ಪದಗಳಿಗೆ ಬದಲಾಗಿ "**ಹನ್ನೆರಡು ತಿಂಗಳು**" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

**ಸೂಚನೆ:** ಪ್ರಕರಣ 27(1) ಕ್ಕೆ ಮಾಡಿದ ಮಾರ್ಪಾಡು ದಿನಾಂಕ 30-9-2006 ರ ವರೆಗೆ ಜಾರಿಯಲ್ಲಿರತಕ್ಕದ್ದು, ಈ ಅವಧಿ ಮುಗಿದ ನಂತರ ಈ ಆದೇಶದ ಮಾರ್ಪಾಡಿಗೆ ಮೊದಲು ಜಾರಿಯಲ್ಲಿದ್ದಂತೆ ಸದರಿ 27 (1)ಕ್ಕೆ ಪ್ರಕರಣದ ಉಪಬಂಧಗಳು ಪುನ: ಜಾರಿಗೆ ಬರತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಾಣದ ರಂಗಪ್ಪ**

ಪಿ.ಆರ್. 784 ಸರ್ಕಾರದ ಅಧೀನ ಕಾರ್ಯದರ್ಶಿ, ಸಹಕಾರ ಇಲಾಖೆ.

**ವಿಷಯ:** ನೆಲಮಂಗಲ ಪ್ರಾಥಮಿಕ ಸಹಕಾರಿ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕ್ ನಿಯಮಿತ ಇದರ 2003-04 ಮತ್ತು 2004-05ನೇ ಸಾಲಿನ ವಾರ್ಷಿಕ ಮಹಾ ಸಭೆಯನ್ನು ನಡೆಸಲು ಅವಧಿ ವಿಸ್ತರಣೆ ಬಗ್ಗೆ.

**ಓದಲಾಗಿದೆ:** ಅಧ್ಯಕ್ಷರು, ಪ್ರಾಥಮಿಕ ಸಹಕಾರಿ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕ್ ನಿಯಮಿತ, ನೆಲಮಂಗಲ ಇವರ ಪತ್ರ ಸಂಖ್ಯೆ:ಪಿಸಿಎ-ಆರ್‌ಡಿಬಿ/256/2005-06, ದಿನಾಂಕ:13.01.2006.

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರದಲ್ಲಿ ಪ್ರಾಥಮಿಕ ಸಹಕಾರಿ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕ್ ನಿಯಮಿತ, ನೆಲಮಂಗಲ ಇದರ 2003-04 ಮತ್ತು 2004-05ನೇ ಸಾಲಿನ ವಾರ್ಷಿಕ ಮಹಾಸಭೆಗಳನ್ನು ದಿನಾಂಕ:31.03.2006ರೊಳಗೆ ನಡೆಸಬೇಕಾಗಿದ್ದು ಬ್ಯಾಂಕಿನ ಸಿಬ್ಬಂದಿ ವರ್ಗದವರು ಸುಸ್ತಿ ಸಾಲಗಳ ವಸೂಲಾತಿ ಕೆಲಸದಲ್ಲಿ ತೊಡಗಿರುವುದರಿಂದ ಹಾಗೂ ಸದರಿ ಬ್ಯಾಂಕು ಕಳೆದ ಆರ್ಥಿಕ ವರ್ಷದ ಅಂತ್ಯಕ್ಕೆ ರೂ.241ಲಕ್ಷ ಕ್ರೋಢಿಕೃತ ನಷ್ಟದಲ್ಲಿದ್ದು ಪ್ರತಿ ಮಹಾಸಭೆಗೆ ಕನಿಷ್ಟ ರೂ.60,000/- ಖರ್ಚು ಬರುವುದರಿಂದ 2003-04 ಮತ್ತು 2004-05ನೇ ಸಾಲಿನ ವಾರ್ಷಿಕ ಮಹಾಸಭೆಗಳನ್ನು 2005-06ನೇ ಸಾಲಿನ ವಾರ್ಷಿಕ ಮಹಾಸಭೆಯ ಜೊತೆಗೆ ಏಕಕಾಲದಲ್ಲಿ ನಡೆಸಲು ಅನುವಾಗುವಂತೆ ದಿನಾಂಕ: 31.05.2006 ವರೆಗೆ ಅವಧಿ ವಿಸ್ತರಿಸುವಂತೆ ಬ್ಯಾಂಕಿನ ಅಧ್ಯಕ್ಷರು ಕೋರಿರುತ್ತಾರೆ.

ಸದರಿ ಪ್ರಸ್ತಾವೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಇ 23 ಸಿಎಲ್‌ಎಮ್ 2006, ಬೆಂಗಳೂರು, ದಿನಾಂಕ: 17ನೇ ಏಪ್ರಿಲ್ 2006**

ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 121ರಡಿಯಲ್ಲಿ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ, ಸರ್ಕಾರವು ನೆಲಮಂಗಲ ಪ್ರಾಥಮಿಕ ಸಹಕಾರಿ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕ್ ನಿಯಮಿತ ಇದರ 2003-04 ಮತ್ತು 2004-05ನೇ ಸಾಲಿನ ವಾರ್ಷಿಕ ಮಹಾ ಸಭೆಯನ್ನು ನಡೆಸಲು ದಿನಾಂಕ: 31.05.2006ರ ವರೆಗೆ ಕಾಲಾವಕಾಶ ನೀಡಲು ಅನುವಾಗುವಂತೆ ನೆಲಮಂಗಲ ಪ್ರಾಥಮಿಕ ಸಹಕಾರಿ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕ್ ನಿಯಮಿತ ಇದಕ್ಕೆ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ27(1)ರ ಉಪಬಂಧಗಳು ಕೆಳಗಿನ ಮಾರ್ಪಾಟಿನೊಂದಿಗೆ ಅನ್ವಯವಾಗುತ್ತದೆಂದು ನಿರ್ದೇಶಿಸುತ್ತದೆ ಎಂದರೆ:

**27ರ ಪ್ರಕರಣದಲ್ಲಿ:**

27ನೇ ಪ್ರಕರಣ ಉಪಪ್ರಕರಣ(1)ರ ಪರಂತುಕದಲ್ಲಿನ "ಆರು ತಿಂಗಳು" ಎಂಬ ಪದಗಳಿಗೆ ಬದಲಾಗಿ "2003-04ನೇ ಸಾಲಿನ ವಾರ್ಷಿಕ ಮಹಾಸಭೆಗೆ ಸಂಬಂಧಪಟ್ಟಂತೆ ಇಪ್ಪತ್ತು ತಿಂಗಳು 2004-05ನೇ ಸಾಲಿನ ವಾರ್ಷಿಕ ಮಹಾಸಭೆಗೆ ಸಂಬಂಧಪಟ್ಟಂತೆ ಎಂಟು ತಿಂಗಳು" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

**ಸೂಚನೆ:** ಪ್ರಕರಣ27(1)ಕ್ಕೆ ಮಾಡಿದ ಈ ಮಾರ್ಪಾಡು ದಿನಾಂಕ:31.05.2006ರ ವರೆಗೆ ಜಾರಿಯಲ್ಲಿರತಕ್ಕದ್ದು. ಈ ಅವಧಿ ಮುಗಿದ ನಂತರ ಈ ಆದೇಶದ ಮಾರ್ಪಾಡಿಗೆ ಮೊದಲು ಜಾರಿಯಲ್ಲಿದ್ದಂತೆ ಸದರಿ 27(1)ಕ್ಕೆ ಪ್ರಕರಣದ ಉಪಬಂಧಗಳು ಪುನ:ಜಾರಿಗೆ ಬರತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎಸ್. ಹುಚ್ಚಾಚಾರಿ**

ಪಿ.ಆರ್. 797 ವಿಶೇಷ ಕರ್ತವ್ಯಾಧಿಕಾರಿ, ಸಹಕಾರ ಇಲಾಖೆ.

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಶ್ರೀ ಮಹಮ್ಮದ್ ಗೌಸ್, ನಿವೃತ್ತ ಕೆಎಎಸ್ ಅಧಿಕಾರಿ, ಶ್ರೀ ಹೊಂಬಯ್ಯ, ನಿವೃತ್ತ ಜಿಲ್ಲಾ ಖಜಾನಾಧಿಕಾರಿ, ಶ್ರೀ ಡಿ.ರಾಧಾಕೃಷ್ಣ, ನಿವೃತ್ತ ಶಿರಸ್ತೇದಾರ್, ಅವರುಗಳ ವಿರುದ್ಧ ಜಂಟಿ ಇಲಾಖಾ ವಿಚಾರಣೆ-ವಿಚಾರಣಾಧಿಕಾರಿ ಮತ್ತು ಮಂಡನಾಧಿಕಾರಿಯವರನ್ನು ನೇಮಿಸುವ ಬಗ್ಗೆ.

**ಓದಲಾಗಿದೆ:**
1) ನೋಟೀಸ್ ಸಂಖ್ಯೆ:ಸಿಆಸುಇ 41 ಎಸ್‌ಇಎನ್ 04 ದಿನಾಂಕ:16.06.05.
2) ಶ್ರೀ ಮಹಮ್ಮದ್ ಗೌಸ್, ನಿವೃತ್ತ ಕೆಎಎಸ್ ಅಧಿಕಾರಿ ಅವರ ದಿನಾಂಕ:30.06.2005ರ ಲಿಖಿತ ಉತ್ತರ.
3) ಶ್ರೀ ಹೊಂಬಯ್ಯ, ನಿವೃತ್ತ ಜಿಲ್ಲಾ ಖಜಾನಾಧಿಕಾರಿ ಅವರ ದಿನಾಂಕ:16.08.2005ರ ಲಿಖಿತ ಉತ್ತರ.
4) ಶ್ರೀ ಡಿ.ರಾಧಾಕೃಷ್ಣ, ನಿವೃತ್ತ ಶಿರಸ್ತೇದಾರ್ ಅವರ ದಿನಾಂಕ:15.09.2005ರ ಲಿಖಿತ ಉತ್ತರ.

**ಪ್ರಸ್ತಾವನೆ:**

ಚಾಮರಾಜನಗರ ಜಿಲ್ಲಾಧಿಕಾರಿಗಳ ಕಛೇರಿಯಲ್ಲಿ ಶ್ರೀ ಮಹ್ಮದ್ ಗೌಸ್, ಕೆಎಎಸ್ ಅಧಿಕಾರಿ ಅವರು ಕೇಂದ್ರಸ್ಥಾನಿಕ ಸಹಾಯಕರ ಹುದ್ದೆಯಲ್ಲಿ, ಶ್ರೀ ಹೊಂಬಯ್ಯ, ಜಿಲ್ಲಾ ಖಜಾನಾಧಿಕಾರಿ ಅವರು ಜಿಲ್ಲಾ ಖಜಾನಾಧಿಕಾರಿಯ ಹುದ್ದೆಯಲ್ಲಿ ಹಾಗೂ ಶ್ರೀ ಡಿ.ರಾಧಾಕೃಷ್ಣ, ನಿವೃತ್ತ ಶಿರಸ್ತೇದಾರ್ ಅವರು ಶಿರಸ್ತೇದಾರ್ ಹುದ್ದೆಯಲ್ಲಿ ಕಾರ್ಯನಿರ್ವಹಿಸುತ್ತಿದ್ದಾಗ ಚಾಮರಾಜನಗರ ಜಿಲ್ಲೆಗೆ 2001-02ನೇ ಸಾಲಿನಲ್ಲಿ ಆಡಳಿತ ಮಟ್ಟದ ಉನ್ನತೀಕರಣಕ್ಕಾಗಿ ಹಾಗೂ ಕಛೇರಿಯ ಆಧುನೀಕರಣ ಸಂಬಂಧ ಪೀಠೋಪಕರಣಗಳು, ಯಂತ್ರೋಪಕರಣಗಳು ಹಾಗೂ ಕಟ್ಟಡ ನಿರ್ಮಾಣಕ್ಕೆ ಸಂಬಂಧಿಸಿದಂತೆ ನೀತಿ ನಿಯಮಗಳನ್ನು ಉಲ್ಲಂಘಿಸಿ ಅನುದಾನ ಬಿಡುಗಡೆ

ಮಾಡುವುದರ ಮೂಲಕ ಹಣ ದುರುಪಯೋಗ ಮಾಡಿಕೊಂಡ ಆರೋಪದ ಸಂಬಂಧ ಅವರುಗಳಿಗೆ ಮೇಲೆ (1)ರಲ್ಲಿ ಓದಲಾದ ದಿನಾಂಕ:16.06.05ರ ನೋಟೀಸನ್ನು ಜಾರಿ ಮಾಡಿ ಸಮಜಾಯಿಷಿ ಕೇಳುವ ಮೂಲಕ ಅವರುಗಳ ವಿರುದ್ಧ ಇಲಾಖಾ ವಿಚಾರಣೆಯನ್ನು ಪ್ರಾರಂಭಿಸಲಾಯಿತು. ನೋಟೀಸಿಗೆ ಆರೋಪಿತರುಗಳು ಉತ್ತರ ಸಲ್ಲಿಸಿ ತಮ್ಮಗಳ ಮೇಲೆ ಹೊರಿಸಲಾದ ದೋಷಾರೋಪಣೆಗಳನ್ನು ನಿರಾಕರಿಸಿರುತ್ತಾರೆ. ಆದ್ದರಿಂದ ಆರೋಪದಲ್ಲಿನ ಸತ್ಯಾಸತ್ಯತೆಯನ್ನು ವಿಚಾರಣೆ ಮೂಲಕ ತಿಳಿಯುವ ದೃಷ್ಟಿಯಿಂದ ವಿಚಾರಣೆಯನ್ನು ಮುಂದುವರಿಸಲು ಸರ್ಕಾರವು ತೀರ್ಮಾನಿಸಿ ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 41 ಎಸ್‌ಇಎನ್ 04 ಬೆಂಗಳೂರು ದಿನಾಂಕ: 22ನೇ ಏಪ್ರಿಲ್ 2006**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಸಂದರ್ಭಗಳಿಂದಾಗಿ, ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 214ರೊಡನೆ ಓದಿಕೊಂಡಂತೆ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11(2) ಹಾಗೂ ಅದೇ ನಿಯಮಾವಳಿಯ 13ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ಮಹಮ್ಮದ್ ಗೌಸ್, ನಿವೃತ್ತ ಕೆಎಎಸ್ ಅಧಿಕಾರಿ, ಶ್ರೀ ಹೊಂಬಯ್ಯ, ನಿವೃತ್ತ ಜಿಲ್ಲಾ ಖಜಾನಾಧಿಕಾರಿ, ಶ್ರೀ ಡಿ.ರಾಧಾಕೃಷ್ಣ, ನಿವೃತ್ತ ಶಿರಸ್ತೇದಾರ್ ಅವರುಗಳ ಮೇಲೆ ಹೊರಿಸಲಾದ ಆರೋಪಗಳ ಕುರಿತು ವಿಚಾರಣೆ ನಡೆಸುವ ಸಲುವಾಗಿ ಶ್ರೀ ಶ್ರೀನಿವಾಸ, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು, ಬೆಂಗಳೂರು ಇವರನ್ನು ವಿಚಾರಣಾಧಿಕಾರಿಯನ್ನಾಗಿ ಈ ಮೂಲಕ ನೇಮಿಸುತ್ತದೆ. ಈ ವಿಚಾರಣೆಗಾಗಿ ಅವರು ಸರ್ಕಾರಿ ಆದೇಶ ಸಂಖ್ಯೆ:ಸಿಆಸುಇ 16 ಸೇಇವಿ 2005 ದಿನಾಂಕ:23.08.2005ರಂತೆ ರೂ.6000/- ಗೌರವಧನ ಹಾಗೂ ಸರ್ಕಾರಿ ಆದೇಶ ಸಂಖ್ಯೆ:ಸಿಆಸುಇ 45 ಸೇಇವಿ 2001 ದಿನಾಂಕ:04.03.2002 ರಂತೆ ರೂ.1000/- ವಾಹನ ಭತ್ಯೆಯನ್ನು ಪಡೆಯುತ್ತಾರೆ. ವಿಚಾರಣೆಯನ್ನು 3 ತಿಂಗಳೊಳಗಾಗಿ ಮುಕ್ತಾಯಗೊಳಿಸಿ ವರದಿ ಸಲ್ಲಿಸುವುದು.

ಶಿಸ್ತು ಪ್ರಾಧಿಕಾರಿಯ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿಯವರ ಮುಂದೆ ಮಂಡಿಸಲು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11(5)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಚಾಮರಾಜನಗರ ಜಿಲ್ಲಾಧಿಕಾರಿಯವರ ಕೇಂದ್ರ ಸ್ಥಾನಿಕ ಸಹಾಯಕರನ್ನು ಮಂಡನಾಧಿಕಾರಿಯನ್ನಾಗಿ ಈ ಮೂಲಕ ನೇಮಿಸುತ್ತದೆ.

ವಿಚಾರಣೆಯನ್ನು ಬೆಂಗಳೂರಿನಲ್ಲಿ ನಡೆಸಲು ಅಗತ್ಯ ಸ್ಥಳಾವಕಾಶ, ಶೀಘ್ರಲಿಪಿಗಾರರ ಸೇವೆ, ಸ್ಟೇಷನರಿ ಇತ್ಯಾದಿಗಳನ್ನು ಒದಗಿಸಲು ಜಿಲ್ಲಾಧಿಕಾರಿ, ಬೆಂಗಳೂರು ನಗರ ಅವರು ಕ್ರಮ ಕೈಗೊಳ್ಳುತ್ತಾರೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ರಘುರಾಮ್ ಭಂಡಾರಿ**

ಪಿ.ಆರ್. 675

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ, (ಸೇವೆಗಳು-3).

**ವಿಷಯ:** ಶ್ರೀಮತಿ ಸಿ.ಸರೋಜ, ಸರ್ಕಾರದ ಅಧೀನ ಕಾರ್ಯದರ್ಶಿ, ಕರ್ನಾಟಕ ಸರ್ಕಾರದ ಸಚಿವಾಲಯ ಇವರ ವಿರುದ್ಧದ ಇಲಾಖಾ ವಿಚಾರಣೆ-ದಂಡನೆ ವಿಧಿಸಿ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ:**
1) ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 17 ಎಸ್‌ಇಎನ್ 2002 ದಿನಾಂಕ:19.05.2004.
2) ಶ್ರೀ ಎಂ.ಎಸ್.ನಟರಾಜಮೂರ್ತಿ, ನಿವೃತ್ತ ನ್ಯಾಯಾಧೀಶರ ದಿ:24.11.2005ರ ವಿಚಾರಣಾ ವರದಿ.
3) ಎರಡನೇ ಕಾರಣ ಕೇಳುವ ನೋಟೀಸ್ ಸಂ:ಸಿಆಸುಇ 17 ಎಸ್‌ಇಎನ್ 02:01.04.2006.
4) ಶ್ರೀಮತಿ ಸಿ.ಸರೋಜ, ಸರ್ಕಾರದ ಅಧೀನ ಕಾರ್ಯದರ್ಶಿರವರ ದಿ:07.04.2006ರ ಲಿಖಿತ ಉತ್ತರ.

**ಪ್ರಸ್ತಾವನೆ:**

ಶ್ರೀಮತಿ ಸಿ.ಸರೋಜ, ಸರ್ಕಾರದ ಅಧೀನ ಕಾರ್ಯದರ್ಶಿ, ಆರ್ಥಿಕ ಇಲಾಖೆ (ಕಾನೂನು ಕೋಶ) ರವರು ವಾರ್ತಾ, ಪ್ರವಾಸೋದ್ಯಮ ಮತ್ತು ಯುವಜನ ಸೇವಾ ಇಲಾಖೆಯಲ್ಲಿ ಸರ್ಕಾರದ ಅಧೀನ ಕಾರ್ಯದರ್ಶಿಯಾಗಿ ಹಾಗೂ ಕರ್ನಾಟಕ ರಾಜ್ಯ ಮಧ್ಯಪಾನ ಸಂಯಮ ಮಂಡಳಿಯ ಪ್ರಭಾರ ಕಾರ್ಯದರ್ಶಿಯಾಗಿ ಕಾರ್ಯನಿರ್ವಹಿಸುತ್ತಿದ್ದಾಗ ದಿ:02.10.97 ರಿಂದ 06.10.97ರವರೆಗೆ ಬೀದರ್‌ನಲ್ಲಿ ನಡೆದ ಜಾತ್ರಾ ಸಂದರ್ಭದಲ್ಲಿ ಮಧ್ಯಪಾನ ಸಂಯಮ ಮಂಡಳಿಯ ವತಿಯಿಂದ ಕುಡಿತದ ದುಷ್ಪರಿಣಾಮದ ಬಗ್ಗೆ ಜನಜಾಗೃತಿ ಮೂಡಿಸಲು ಹಮ್ಮಿಕೊಳ್ಳಲಾಗಿದ್ದ ವಿವಿಧ ಕಾರ್ಯಕ್ರಮಗಳಿಗಾಗಿ ವೆಚ್ಚ ಮಾಡುವಲ್ಲಿ ಕರ್ನಾಟಕ ಆರ್ಥಿಕ ಸಂಹಿತೆ ಅನುಚ್ಛೇದ 15,24,61 ಮತ್ತು 65ರಲ್ಲಿನ ಮಾರ್ಗಸೂಚಿಗಳನ್ನು ಉಲ್ಲಂಘಿಸಿ ರೂ.2,67,000/-ಗಳನ್ನು ವೆಚ್ಚ ಮಾಡಿದ ಹಾಗೂ ಪ್ರಚಾರ ಕಾರ್ಯಕ್ಕಾಗಿ ಅನುದಾನ ಇಲ್ಲದಿದ್ದರೂ ನೌಕರರ ವೇತನದ ಅನುದಾನದಿಂದ ಸರ್ಕಾರದ ಅನುಮತಿಯಿಲ್ಲದೆ ಮೈಸೂರು ವಸ್ತು ಪ್ರದರ್ಶನದಲ್ಲಿ ಮಳಿಗೆ ತೆರೆದು ರೂ.1,52,356/- ಅನಾವಶ್ಯಕ ವೆಚ್ಚ ಮಾಡಿದ ಹೀಗೆ ಒಟ್ಟು ರೂ.4,19,356/-ಗಳ ಆರ್ಥಿಕ ನಷ್ಟ ಉಂಟು ಮಾಡಿ, ಲೆಕ್ಕಪತ್ರಗಳ ವರದಿಯಲ್ಲಿನ ಆಕ್ಷೇಪಣೆಗಳಿಗೆ ಉತ್ತರ ನೀಡದೇ ಉಳಿದ ಆರೋಪದ ಬಗ್ಗೆ ಇಲಾಖಾ ವಿಚಾರಣೆ ನಡೆಸಲು ಮೇಲೆ (1)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಶ್ರೀ ಎಂ.ಎಸ್. ನಟರಾಜಮೂರ್ತಿ, ನಿವೃತ್ತ ನ್ಯಾಯಾಧೀಶರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಗಿತ್ತು. ವಿಚಾರಣೆ ನಡೆಸಿದ ವಿಚಾರಣಾಧಿಕಾರಿಗಳು ದಿ:24.11.2005ರಂದು ಸರ್ಕಾರಕ್ಕೆ ವಿಚಾರಣಾ ವರದಿಯನ್ನು ಸಲ್ಲಿಸಿದ್ದಾರೆ.

ಸದರಿ ವಿಚಾರಣಾ ವರದಿಯನ್ನು ಪರಿಶೀಲಿಸಲಾಗಿ, ಆಪಾದಿತರ ಮೇಲೆ ಮಾಡಿರುವ ದೋಷಾರೋಪಣೆ ಅವಶ್ಯಕತೆಗಿಂತ ಮಿಗಿಲಾಗಿ ಕಾರ್ಯಕ್ರಮಗಳಿಗೆ ಖರ್ಚು ಮಾಡಿರುವ ಬಗ್ಗೆ ಯಾವುದು ಜಾಸ್ತಿ ಖರ್ಚಾಗಿದೆ, ಎಷ್ಟು ಹಣ ಮಿತಿ ಮೀರಿ ಖರ್ಚು ಮಾಡಿರುತ್ತಾರೆ ಎಂಬುದು ಋಜುವಾತು ಪಡಿಸಿಲ್ಲವಾದುದರಿಂದ ಆಪಾದಿತರು ನಿರ್ದೋಷಿ ಎಂದು ತೀರ್ಮಾನಿಸಿ ವರದಿ ಮಾಡಿದ್ದಾರೆ.

ಈ ಸಂಬಂಧ ವಿಚಾರಣಾ ವರದಿಯನ್ನು ಆಪಾದಿತರಿಗೆ ಒದಗಿಸಿ ಮೇಲೆ(3)ರಲ್ಲಿ ಓದಲಾದ 2ನೇ ಕಾರಣ ಕೇಳುವ ನೋಟೀಸನ್ನು ಜಾರಿಗೊಳಿಸಲಾಗಿದೆ. ಇದಕ್ಕೆ ಆಪಾದಿತರು ದಿ:05.11.2005ರ ಲಿಖಿತ ವಾದ ಪರಿಗಣಿಸಿ ತಮಗೆ ನೀಡಿರುವ 2ನೇ ಕಾರಣ ಕೇಳುವ ನೋಟೀಸನ್ನು ಹಿಂದಕ್ಕೆ ಪಡೆದು ಆರೋಪ ಮುಕ್ತಗೊಳಿಸಬೇಕೆಂದು ಕೋರಿದ್ದಾರೆ. ಆದರೆ, ವಿಚಾರಣಾ ವರದಿಯಲ್ಲಿ ಕೆಳಕಂಡ ನ್ಯೂನತೆಗಳಿರುವುದನ್ನು ಶಿಸ್ತು ಪ್ರಾಧಿಕಾರವು ಪರಿಗಣನೆಗೆ ತೆಗೆದುಕೊಂಡಿದೆ.

"ಆರ್ಥಿಕ ಸಂಹಿತೆ ನಿಯಮಗಳನ್ನು ಪಾಲಿಸದೆ ವಾಹನಗಳ ಬಾಡಿಗೆ, ಊಟದ ವೆಚ್ಚ, ವಿಡಿಯೋ ಚಿತ್ರೀಕರಣ ಇತ್ಯಾದಿ ಬಾಬ್ತುಗಳ ಖರ್ಚನ್ನು ಮಾಡುವ ಮುನ್ನ ಅನುಸರಿಸಬೇಕಾದ ವಿಧಿವಿಧಾನಗಳನ್ನು ಅನುಸರಿಸಿರುವುದಕ್ಕೆ ಯಾವುದೇ ಸಾಕ್ಷ್ಯಾಧಾರಗಳಿರುವುದಿಲ್ಲ. ಎರಡನೇಯದಾಗಿ ರೂ.1.52 ಲಕ್ಷ ಹಣವನ್ನು ನೌಕರರ ವೇತನ ಶೀರ್ಷಿಕೆಯಡಿ ಭರಿಸಿ ಅದನ್ನು ಮೈಸೂರು ವಸ್ತು ಪ್ರದರ್ಶನದಲ್ಲಿ ಪ್ರಚಾರ ಕಾರ್ಯಕ್ಕಾಗಿ ವೆಚ್ಚ ಮಾಡಿರುವುದು ಸ್ಪಷ್ಟವಾದ ದುರ್ನಡತೆ. ಕೊನೆಯದಾಗಿ ಲೆಕ್ಕಪತ್ರ ವರದಿಯಲ್ಲಿನ ಆಕ್ಷೇಪಣೆಗಳಿಗೆ ವೈಯಕ್ತಿಕ ಕಾರಣಗಳಿಂದ ಸಕಾಲದಲ್ಲಿ ಉತ್ತರ ನೀಡಲು ಸಾಧ್ಯವಾಗಿರುವುದಿಲ್ಲವೆಂದು ಆರೋಪಿತರು ಒಪ್ಪಿರುತ್ತಾರೆ. ಮೊದಲ ಎರಡು ಆರೋಪಗಳ ಬಗ್ಗೆ ಸಹ ಆಪಾದಿತರು ಲಿಖಿತ ಸಮಜಾಯಿಷಿಯಲ್ಲಿ ಸೇವಾನುಭವದ ಕೊರತೆ, 2 ಕಛೇರಿಗಳು ಒಂದೊಂದು ಕಡೆ ನೆಲೆಗೊಂಡಿದ್ದುದರಿಂದ ಮಾನಸಿಕ ಒತ್ತಡದಿಂದಾಗಿ ಪಾಲಿಸಬೇಕಾದ ನಿಯಮಗಳಲ್ಲಿ ಸ್ವಲ್ಪ ಅಡಚಣೆಯಾಗಿರುತ್ತದೆಯೆಂದು ಒಪ್ಪಿಕೊಂಡಿರುತ್ತಾರೆ."

ಈ ಪರಿಸ್ಥಿತಿಗಳಲ್ಲಿ ಆರೋಪಿತರ ಮೇಲೆ ಹೊರಿಸಲಾದ ಆರೋಪಗಳು ತನ್‌ತಾನಾಗಿಯೇ ರುಜುವಾತುಗೊಂಡಿರುವ ಹಿನ್ನೆಲೆಯಲ್ಲಿ ವಿಚಾರಣಾ ವರದಿಯನ್ನು ತಿರಸ್ಕರಿಸಿ ಆರೋಪಿತರು ಎಸಗಿರುವ ದುರ್ನಡತೆಯ ಸ್ವರೂಪವನ್ನು ಮನಗಂಡು ಸರ್ಕಾರವು ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 17 ಎಸ್‌ಇಎನ್ 2002 ಬೆಂಗಳೂರು ದಿನಾಂಕ: 2ನೇ ಮೇ 2006**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಹಿನ್ನೆಲೆಯಲ್ಲಿ ಸರ್ಕಾರವು ಆರೋಪಿತ ಅಧಿಕಾರಿಯಾದ ಶ್ರೀಮತಿ ಸಿ.ಸರೋಜ, ಸರ್ಕಾರದ ಅಧೀನ ಕಾರ್ಯದರ್ಶಿ ಅವರಿಗೆ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 8(ii)ರಡಿಯಲ್ಲಿ ವಾಗ್ದಂಡನೆ (CENSURE) ಯನ್ನು ವಿಧಿಸುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ರಘುರಾಮ್ ಭಂಡಾರಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ, (ಸೇವೆಗಳು-3).

ಪಿ.ಆರ್. 737

**ವಿಷಯ:** ಶ್ರೀ ಟಿ.ಪಿ.ಮುನಿನಾರಾಯಣಪ್ಪ, ಕೆಎಎಸ್ (ಕಿರಿಯ ಶ್ರೇಣಿ) ಅಧಿಕಾರಿ ಅವರ ವಿರುದ್ಧ ಇಲಾಖಾ ವಿಚಾರಣೆ-ಎಚ್ಚರಿಕೆ ನೀಡಿ ಅಂತಿಮ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ:** 1) ನೋಟೀಸ್ ಸಂಖ್ಯೆ:ಸಿಆಸುಇ 140 ಎಸ್‌ಇಎನ್ 05 ದಿ:01.12.2005.

2) ಶ್ರೀ ಟಿ.ಪಿ.ಮುನಿನಾರಾಯಣಪ್ಪ, ಕೆಎಎಸ್ (ಕಿರಿಯ ಶ್ರೇಣಿ) ಅಧಿಕಾರಿ ಅವರ ದಿ:08.12.2005ರ ಲಿಖಿತ ಉತ್ತರ.

**ಪ್ರಸ್ತಾವನೆ:**

ನೇಮಕಾತಿ ನಿರೀಕ್ಷಣೆಯಲ್ಲಿದ್ದ ಕೆಎಎಸ್ (ಕಿರಿಯ ಶ್ರೇಣಿ) ಅಧಿಕಾರಿಯಾದ ಶ್ರೀ ಟಿ.ಪಿ.ಮುನಿನಾರಾಯಣಪ್ಪ ಅವರನ್ನು ಸರ್ಕಾರದ ಅಧಿಸೂಚನೆ ಸಂಖ್ಯೆ:ಸಿಆಸುಇ 9 ಆಸೇವ 05 ದಿ:28.06.05ರಲ್ಲಿ ಉತ್ತರ ಕನ್ನಡ ಜಿಲ್ಲೆಯ ಭಟ್ಕಳ ವಿಭಾಗಾಧಿಕಾರಿ ಹುದ್ದೆಗೆ ಸ್ಥಳ ನಿಯುಕ್ತಿಗೊಳಿಸಿ ನೇಮಿಸಲಾಗಿದ್ದು, ಅವರು ಸರ್ಕಾರದ ಆದೇಶದಂತೆ ವರ್ಗಾಯಿಸಿ ನೇಮಿಸಿದ ಹುದ್ದೆಗೆ ಕರ್ತವ್ಯಕ್ಕೆ ಹಾಜರಾಗದೆ ಅನಧಿಕೃತವಾಗಿ ಗೈರು ಹಾಜರಾಗುವುದರ ಮೂಲಕ ಸರ್ಕಾರದ ಸುತ್ತೋಲೆ/ಆದೇಶಗಳನ್ನು ಉಲ್ಲಂಘಿಸಿರುವುದರ ಮೂಲಕ ತೀವ್ರ ದುರ್ನಡತೆ ಎಸಗಿರುವ ಆರೋಪಕ್ಕಾಗಿ ಅವರಿಗೆ ಮೇಲೆ(1)ರಲ್ಲಿ ಓದಲಾದ ನೋಟೀಸನ್ನು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 12ರನ್ವಯ ಜಾರಿ ಮಾಡುವುದರ ಮೂಲಕ ಅವರ ವಿರುದ್ಧ ಇಲಾಖಾ ವಿಚಾರಣೆಯನ್ನು ಪ್ರಾರಂಭಿಸಲಾಯಿತು. ಸದರಿ ನೋಟೀಸಿಗೆ ಆರೋಪಿತ ಅಧಿಕಾರಿಯು ಮೇಲೆ (2)ರಲ್ಲಿ ಓದಲಾದ ಉತ್ತರ ಸಲ್ಲಿಸಿ ತಾವು ಸರ್ಕಾರದ ಅಧಿಸೂಚನೆ ಸಂಖ್ಯೆ:ಸಿಆಸುಇ 9 ಆಸೇವ 05 ದಿ:28.06.05ರನ್ವಯ ವರ್ಗಾವಣೆಗೊಂಡ ಉತ್ತರ ಕನ್ನಡ ಜಿಲ್ಲೆಯ ಭಟ್ಕಳ ಉಪ ವಿಭಾಗಾಧಿಕಾರಿಯ ಹುದ್ದೆಗೆ ಹಾಜರಾಗಲು ಹಿಂದಿನ ಹುದ್ದೆಯಿಂದ ಬಿಡುಗಡೆಗೊಂಡು ಸೇರುವಿಕೆ ಕಾಲವನ್ನು ಉಪಯೋಗಿಸುತ್ತಿದ್ದ ಸಮಯದಲ್ಲಿ ಬೆನ್ನು ನೋವು ಕಾಣಿಸಿಕೊಂಡ ಕಾರಣ ವೈದ್ಯರು ನೀಡಿದ ಸಲಹೆಯಂತೆ ವಿಶ್ರಾಂತಿ ಪಡೆಯುತ್ತಿದ್ದುದಾಗಿ ತಿಳಿಸಿ ಸರ್ಕಾರದ ಆದೇಶವನ್ನು ಉಲ್ಲಂಘಿಸುವ ಯಾವುದೇ ಉದ್ದೇಶವಿರಲಿಲ್ಲವೆಂದು ತಿಳಿಸಿರುತ್ತಾರೆ. ವೈದ್ಯರ ಸಲಹೆ ಸೂಚನೆಯಂತೆ ವಿಶ್ರಾಂತಿ ಪಡೆಯುತ್ತಿದ್ದ ಸಮಯದಲ್ಲಿ ಸರ್ಕಾರವು ಹಿಂದಿನ ವರ್ಗಾವಣೆ ಆದೇಶವನ್ನು ಮಾರ್ಪಡಿಸಿ ವಿಶೇಷ ಭೂಸ್ವಾಧೀನಾಧಿಕಾರಿ, ಕೆ.ಐ.ಎ.ಡಿ.ಬಿ., ಬೆಂಗಳೂರು ಹುದ್ದೆಗೆ ವರ್ಗಾಯಿಸಿ ನೇಮಿಸಿದ್ದರ ಮೇರೆಗೆ ದಿ:21.11.05 ರಂದು ಕರ್ತವ್ಯಕ್ಕೆ ಹಾಜರಾಗಿರುತ್ತೇನೆಂದು ತಿಳಿಸಿ ಇದರಿಂದಾಗಿ ಸರ್ಕಾರದ ಆದೇಶವನ್ನು ಉಲ್ಲಂಘಿಸಿರುವುದಿಲ್ಲವೆಂದು ತಿಳಿಸಿ ತಮ್ಮನ್ನು ಆರೋಪಮುಕ್ತರನ್ನಾಗಿಸುವಂತೆ ಕೋರಿರುತ್ತಾರೆ.

ಆರೋಪಿತರು ಸಲ್ಲಿಸಿರುವ ಉತ್ತರವನ್ನು ಪರಿಶೀಲಿಸಲಾಗಿ, ಶ್ರೀ ಟಿ.ಪಿ.ಮುನಿನಾರಾಯಣಪ್ಪ ಅವರು ಅವರ ವರ್ಗಾವಣೆಯ ಸಂದರ್ಭದಲ್ಲಿ ಬೆನ್ನು ನೋವಿನ ಸಂಬಂಧ ವೈದ್ಯಕೀಯ ಕಾರಣದ ಮೇರೆಗೆ ರಜೆಯ ಮೇಲೆ ತೆರಳಿರುವುದು ಅವರು ಸಲ್ಲಿಸಿರುವ ವೈದ್ಯಕೀಯ ಪ್ರಮಾಣ ಪತ್ರದಿಂದ ದೃಢಪಟ್ಟಿರುತ್ತದೆ. ಅವರು ಸಲ್ಲಿಸಿರುವ ಹೇಳಿಕೆಯಲ್ಲಿನ ಅಂಶಗಳು ಪ್ರಶ್ನಾರ್ಹವಾಗಿದ್ದರೂ ಸಹ ಅವುಗಳನ್ನು dispute ಮಾಡಲು ಬರುವುದಿಲ್ಲ. ಸದರಿ ಅಧಿಕಾರಿಯವರು ವಿಶ್ರಾಂತಿ ಪಡೆಯುತ್ತಿದ್ದಾಗ ಹಿಂದಿನ ವರ್ಗಾವಣೆ ಆದೇಶವನ್ನು ಮಾರ್ಪಡಿಸಿ ಬೇರೆ ಹುದ್ದೆಗೆ ವರ್ಗಾಯಿಸಿ ನೇಮಿಸಿದ್ದರಿಂದ, ಈ ವರ್ಗಾಯಿಸಿ ನೇಮಿಸಿದ ಹುದ್ದೆಗೆ ಅವರು ಕರ್ತವ್ಯಕ್ಕೆ ಹಾಜರಾಗಿರುವುದನ್ನು ಗಮನಿಸಲಾಗಿ, ಈ ಹಿನ್ನೆಲೆಯಲ್ಲಿ ಆರೋಪಿತರು ಸಲ್ಲಿಸಿರುವ ವಿವರಣೆಯಲ್ಲಿನ ಅಂಶಗಳನ್ನು ಪರಿಶೀಲಿಸಿ ಅವರಿಗೆ ಎಚ್ಚರಿಕೆಯನ್ನು ನೀಡುವುದರ ಮೂಲಕ ಅವರ ವಿರುದ್ಧ ಮಾಡಲಾದ ಆರೋಪದಿಂದ ಆರೋಪಮುಕ್ತರನ್ನಾಗಿಸಲು ಸರ್ಕಾರವು ತೀರ್ಮಾನಿಸಿ ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 127 ಎಸ್‌ಇಎನ್ 05 ಬೆಂಗಳೂರು ದಿನಾಂಕ: 28ನೇ ಏಪ್ರಿಲ್ 2006.**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಸಂದರ್ಭಗಳಿಂದಾಗಿ ಸರ್ಕಾರವು ಶ್ರೀ ಟಿ.ಪಿ.ಮುನಿನಾರಾಯಣಪ್ಪ, ಕೆಎಎಸ್ (ಕಿರಿಯ ಶ್ರೇಣಿ) ಅಧಿಕಾರಿ ಅವರನ್ನು ದಿ:01.12.05ರ ನೋಟೀಸಿನಲ್ಲಿ ಮಾಡಲಾದ ಆರೋಪದಿಂದ ಆರೋಪಮುಕ್ತರನ್ನಾಗಿಸುತ್ತದೆ ಹಾಗೂ ಇನ್ನು ಮುಂದೆ ಈ ರೀತಿಯ ಪ್ರಸಂಗಗಳಿಗೆ ಅವಕಾಶ ಉಂಟಾಗದಂತೆ ಕಾರ್ಯನಿರ್ವಹಿಸಲು ಈ ಮೂಲಕ ಎಚ್ಚರಿಕೆ ನೀಡಲಾಗಿದೆ.

ಈ ವಿಚಾರಣೆ ನಡೆಯದಿದ್ದಲ್ಲಿ ಅವರು ಯಾವ ಸೌಲಭ್ಯಗಳನ್ನು ಪಡೆಯಲು ಅರ್ಹರಿದ್ದರೋ ಅವುಗಳನ್ನು ಪಡೆಯಲು ಅರ್ಹರಿರುತ್ತಾರೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ರಘುರಾಮ್ ಭಂಡಾರಿ**

ಪಿ.ಆರ್. 738

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ, (ಸೇವೆಗಳು-3).

**ವಿಷಯ:** ಶ್ರೀ ಅಬ್ದುಲ್ ಖಯ್ಯೂಂ, ಹಿಂದಿನ ನಿರ್ದೇಶಕರು, ಕಾಲೇಜು ಶಿಕ್ಷಣ ನಿರ್ದೇಶನಾಲಯ, ಬೆಂಗಳೂರು ರವರುಗಳ ವಿರುದ್ಧ ದಾಖಲಿಸಿರುವ ಕ್ರಿಮಿನಲ್ ಪ್ರಕರಣದಲ್ಲಿ ಅಭಿಯೋಜನಾ ಮಂಜೂರಾತಿ ನೀಡುವ ಕುರಿತು

**ಓದಲಾಗಿದೆ:**
1) ಹೆಚ್ಚುವರಿ ಪೊಲೀಸ್ ಮಹಾನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಪತ್ರ ಸಂಖ್ಯೆ: ಲೋಕ್/ಐಎನ್‌ವಿ(ಜಿ)/ಸಿಟಿ/ಕ್ರೈಂ. 37/1994 ದಿನಾಂಕ:09.09.2005.
2) ಹೆಚ್ಚುವರಿ ಪೊಲೀಸ್ ಮಹಾನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಪತ್ರ ಸಂಖ್ಯೆ: ಲೋಕ್/ಐಎನ್‌ವಿ(ಜಿ)/ಸಿಟಿ/ಕ್ರೈಂ. 37/1994 ದಿನಾಂಕ:15.2.2006.
3) ಅ.ಟಿ. ಸಂಖ್ಯೆ:ಇಡಿ 193 ಡಿಸಿಇ 05 ದಿ:24.10.05.

**ಪ್ರಸ್ತಾವನೆ:**

ಶ್ರೀ ಅಬ್ದುಲ್ ಖಯ್ಯೂಂರವರು 1992-93ನೇ ಸಾಲಿನಲ್ಲಿ ಕಾಲೇಜು ಶಿಕ್ಷಣ ಇಲಾಖೆಯ ನಿರ್ದೇಶಕರಾಗಿದ್ದಾಗ ರಾಜ್ಯದ ತುಮಕೂರು, ಧಾರವಾಡ, ಬೆಳಗಾಂ, ಬಿಜಾಪುರ, ಚಿತ್ರದುರ್ಗ, ಶಿವಮೊಗ್ಗ, ಚಿಕ್ಕಮಗಳೂರು, ದಕ್ಷಿಣಕನ್ನಡ, ಉತ್ತರಕನ್ನಡ, ಹಾಸನ, ಮೈಸೂರು, ಮಂಡ್ಯ, ಕೊಡಗು, ಬೆಂಗಳೂರು ನಗರ ಮತ್ತು ಗ್ರಾಮಾಂತರ, ರಾಯಚೂರು ಹಾಗೂ ಗುಲ್ಬರ್ಗಾ ಜಿಲ್ಲೆಗಳ ವಿವಿಧ ಪ್ರಥಮ ದರ್ಜೆ ಕಾಲೇಜುಗಳಿಗೆ 155 ಡೆಸ್ಕ್‌ಗಳನ್ನು ಹೊರತುಪಡಿಸಿ ಕಳಪೆ ದರ್ಜೆಯ ಮರದ ಡೆಸ್ಕ್‌ಗಳನ್ನು ತೇಗದ ಮರದಿಂದ ಮಾಡಿದವುಗಳೆಂಬುದಾಗಿ ಶ್ರೀ ಕೆ.ಎಸ್.ಶ್ರೀವತ್ಸ, ಜನರಲ್ ಮ್ಯಾನೇಜರ್, ಕೆ.ಎಸ್.ಐ.ಎಂ.ಸಿ. ರವರಿಂದ ಸುಳ್ಳು ದೃಢೀಕರಣ ಪತ್ರವನ್ನು ಪಡೆದು ಬೆಂಗಳೂರಿನ 5 ಖಾಸಗಿ ಸಂಸ್ಥೆಗಳಿಂದ ಖರೀದಿಸಿ ಒಟ್ಟು ರೂ.39,93,792.30 ಗಳನ್ನು ಪಾವತಿಸಿರುತ್ತಾರೆ ಎಂದೂ ಈ ಅವ್ಯವಹಾರದಿಂದ ಸರ್ಕಾರಕ್ಕೆ ರೂ.38,62,042.30 ನಷ್ಟವುಂಟು ಮಾಡಿರುವರೆಂದೂ ಮೇಲೆ (1)ರಲ್ಲಿ ಓದಲಾದ ಕರ್ನಾಟಕ ಲೋಕಾಯುಕ್ತ ಹೆಚ್ಚುವರಿ ಪೊಲೀಸ್ ಮಹಾನಿರ್ದೇಶಕರ ವರದಿಯಲ್ಲಿ ತಿಳಿಸಲಾಗಿದೆ.

ಈ ಬಗ್ಗೆ ಲೋಕಾಯುಕ್ತ ಪೊಲೀಸ್ ವಿಭಾಗವು ಸವಿವರವಾದ ತನಿಖೆ ನಡೆಸಿ ಸದರಿ ಡೆಸ್ಕ್ ಗಳ ಮರದ ಸ್ಯಾಂಪಲ್‌ಗಳನ್ನು ಪಡೆದು, ಸದರಿ ಮರದ ಸ್ಯಾಂಪಲ್‌ಗಳು ತೇಗದ ಮರದಿಂದ ಮಾಡಿದವುಗಳೇ ಅಥವಾ ಇಲ್ಲವೆ ಎಂಬ ಬಗ್ಗೆ ತಜ್ಞರ ಅಭಿಪ್ರಾಯ ಪಡೆದಿದ್ದು, "ಐಡೆಂಟಿಫಿಕೇಷನ್" ವರದಿಯಂತೆ ಖರೀದಿಸಲಾದ 1955 ಸದರಿ ರಿವರ್ಸಿಬಲ್ ಡೆಸ್ಕ್‌ಗಳ ಪೈಕಿ ಕೇವಲ 155 ಮಾದರಿಗಳು (ಡೆಸ್ಕ್‌ಗಳು) ಮಾತ್ರ ತೇಗದ ಮರದ್ದಾಗಿದ್ದು ಉಳಿದ 1800 ಡೆಸ್ಕ್‌ಗಳು ಬೇರೆ ಕಾಡು ಜಾತಿಯ ಮರದ್ದೆಂದು ತಿಳಿಸಿದ್ದಾರೆ. ಇದರಿಂದಾಗಿ ಸರ್ಕಾರಕ್ಕೆ ರೂ.38.62 ಲಕ್ಷ ನಷ್ಟ ಉಂಟು ಮಾಡಿರುವುದು ತನಿಖೆಯಿಂದ ದೃಢಪಟ್ಟಿರುತ್ತದೆಂದು, ಪ್ರಾಥಮಿಕ ವಿಚಾರಣೆಯನ್ನು ಪೂರ್ಣಗೊಳಿಸಿದ ಕರ್ನಾಟಕ ಲೋಕಾಯುಕ್ತದ ಪೊಲೀಸ್ ವಿಭಾಗ ಶ್ರೀ ಅಬ್ದುಲ್ ಖಯ್ಯೂಂರವರು ಎಸಗಿದ ದುರ್ನಡತೆ ಬಗ್ಗೆ ಅವರನ್ನು ನ್ಯಾಯಾಲಯದಲ್ಲಿ ಅಭಿಯೋಗ ಗೊಳಿಸಲು ಸಕ್ಷಮ ಪ್ರಾಧಿಕಾರದ ಅನುಮತಿಯನ್ನು ಮೇಲೆ (1) ಮತ್ತು (2)ರಲ್ಲಿ ಓದಲಾದ ಪತ್ರಗಳಲ್ಲಿ ಕೋರಿದ್ದಾರೆ.

ಸಕ್ಷಮ ಶಿಸ್ತು ಪ್ರಾಧಿಕಾರಿಯಾದ ಸರ್ಕಾರವು ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಕೆಳಕಂಡ ದಾಖಲೆಗಳನ್ನು ಅವಲೋಕಿಸಿರುತ್ತದೆ.

ಕರ್ನಾಟಕ ಲೋಕಾಯುಕ್ತ ಮೊಕದ್ದಮೆ ಸಂಖ್ಯೆ:37/1994ರ ಬಗ್ಗೆ ಲೋಕಾಯುಕ್ತರ ದಾಖಲೆಗಳಾದ,

I ಅಂತಿಮ ವರದಿ

II ಇನ್‌ಸ್ಟಿಟ್ಯೂಟ್ ಆಫ್ ಸೈನ್ಸ್ ಅಂಡ್ ಟೆಕ್ನಾಲಜಿ, ಮಲ್ಲೇಶ್ವರಂ, ಬೆಂಗಳೂರು ರವರ ವರದಿ

III ಲೋಕಾಯುಕ್ತ ವರದಿಯ ಸಂಪುಟ-1ರ ಈ ಕೆಳಗಿನ 5 ಕಡತಗಳು

1. ಪ್ರಥಮ ವರ್ತಮಾನ ವರದಿ, ಮಹಜರ್ ಪ್ರತಿಗಳು.
2. ಕರ್ನಾಟಕ ರಾಜ್ಯದ ವಿವಿಧ ಪ್ರಥಮ ದರ್ಜೆ ಕಾಲೇಜುಗಳಿಂದ ನಡೆಸಿರುವ ಮಹಜರ್ ಮತ್ತು ಪಿ.ಎಫ್ ಗಳು, ಇವುಗಳ ಜೆರಾಕ್ಸ್ ಪ್ರತಿಗಳು.
3. ಇನ್‌ಸ್ಟಿಟ್ಯೂಟ್ ಆಫ್ ವುಡ್ ಸೈನ್ಸ್ ಅಂಡ್ ಟೆಕ್ನಾಲಜಿ, ಮಲ್ಲೇಶ್ವರಂ, ಬೆಂಗಳೂರು ರವರ ದಿನಾಂಕ 24.7.01ರ ಪತ್ರ ಹಾಗೂ ವರದಿಯ ಪ್ರತಿ.
4. ಕರ್ನಾಟಕ ರಾಜ್ಯದ ವಿವಿಧ ಪ್ರಥಮ ದರ್ಜೆ ಕಾಲೇಜುಗಳ ಪ್ರಿನ್ಸಿಪಾಲರುಗಳು ತಮ್ಮ ಕಾಲೇಜುಗಳಿಗೆ ಡೆಸ್ಕ್‌ಗಳನ್ನು ಸರಬರಾಜು ಮಾಡುವಂತೆ ನಿರ್ದೇಶಕರ ಕಛೇರಿಗಳಿಗೆ ಬರೆದುಕೊಂಡ ಬೇಡಿಕೆ ಪತ್ರ ಹಾಗೂ ಆದೇಶ ಪತ್ರಗಳು ಹಾಗೂ ಅದರ ಪ್ರತಿಗಳು.
5. ಶಾಹೀ ಟ್ರೇಡರ್ಸ್‌ಗೆ ಸಂಬಂಧಪಟ್ಟ ಕಡತದ ಪ್ರತಿ, ಕರ್ನಾಟಕ ವುಡ್ ವರ್ಕ್ಸ್‌ಗೆ ಸಂಬಂಧಪಟ್ಟ ಕಡತದ ಪ್ರತಿ, ಬೆಂಗಳೂರು ಇಂಜಿನೀಯರಿಂಗ್‌ಗೆ ಸಂಬಂಧಪಟ್ಟ ಕಡತದ ಪ್ರತಿ, ಅಶೋಕಾ ಸ್ಟೀಲ್ ಇಂಡಸ್ಟ್ರೀಸ್‌ಗೆ ಸಂಬಂಧಪಟ್ಟ ಕಡತದ ಪ್ರತಿ, ತ್ರಿವೇಣಿ ಇಂಡಸ್ಟ್ರೀಸ್‌ಗೆ ಸಂಬಂಧಪಟ್ಟ ಕಡತದ ಪ್ರತಿಗಳು.

IV ಲೋಕಾಯುಕ್ತ ವರದಿಯ ಸಂಪುಟ-2ರ ಈ ಕೆಳಗಿನ 3 ಕಡತಗಳು

1. ಶಾಹೀ ಟ್ರೇಡರ್ಸ್‌ಗೆ ಸಂಬಂಧಪಟ್ಟ ಕಡತದ ಪ್ರತಿ, ಕರ್ನಾಟಕ ವುಡ್ ವರ್ಕ್ಸ್‌ಗೆ ಸಂಬಂಧಪಟ್ಟ ಕಡತದ ಪ್ರತಿ, ಬೆಂಗಳೂರು ಇಂಜಿನೀಯರಿಂಗ್‌ಗೆ ಸಂಬಂಧಪಟ್ಟ ಕಡತದ ಪ್ರತಿ, ಅಶೋಕಾ ಸ್ಟೀಲ್ ಇಂಡಸ್ಟ್ರೀಸ್‌ಗೆ ಸಂಬಂಧಪಟ್ಟ ಕಡತದ ಪ್ರತಿ, ತ್ರಿವೇಣಿ ಇಂಡಸ್ಟ್ರೀಸ್ ರವರು ವಿವಿಧ ಪ್ರಥಮ ದರ್ಜೆ ಕಾಲೇಜುಗಳಿಗೆ ಡೆಸ್ಕ್‌ಗಳನ್ನು ಸರಬರಾಜು

ಮಾಡಿದ ಮೇಲೆ ಹಣ ಸಂದಾಯ ಬಿಡುಗಡೆ ಮಾಡಲು ನಿರ್ದೇಶಕರು ಬರೆದಿರುವ ಪತ್ರಗಳು, ಕೆ.ಎಸ್.ಐ.ಎಂ.ಸಿ. ನವರು ಹಣ ಸಂದಾಯ ಮಾಡಿರುವ ಬಿಲ್ಲಿನ ಪ್ರತಿಗಳು ಹಾಗೂ ಕರಾರು ಪತ್ರಗಳು ಹಾಗೂ ಇವುಗಳ ಜೆರಾಕ್ಸ್ ಪ್ರತಿಗಳು. ಕೆ.ಎಸ್.ಐ.ಎಂ.ಸಿ.ಯ ಪರಿವೀಕ್ಷಣ ಪತ್ರಗಳು, ಹಣ ಪಾವತಿ ಮಾಡಿದ ಪತ್ರಗಳು, ಇವುಗಳ ಜೆರಾಕ್ಸ್ ಪ್ರತಿಗಳು.

2. ಸಾಕ್ಷಿದಾರರ ಹೇಳಿಕೆಗಳು
3. ಪ್ರಥಮ ದರ್ಜೆ ಕಾಲೇಜುಗಳಿಗೆ ಪೀಠೋಪಕರಣಗಳನ್ನು ಪೂರೈಕೆ ಕುರಿತು ಬರೆದಿರುವ ಕಛೇರಿಯ ನೋಟ್‌ಶೀಟ್‌ಗಳು, ಆದೇಶ ಪತ್ರಗಳು, ಇವುಗಳ ಜೆರಾಕ್ಸ್ ಪ್ರತಿಗಳು.

ತನಿಖೆ ಕಾಲದಲ್ಲಿ ಸಂಗ್ರಹಿಸಲಾದ ಡೆಸ್ಕ್‌ಗಳ ಮರದ ಸ್ಯಾಂಪಲ್‌ಗಳನ್ನು ಪಡೆದು, ಆ ಬಗ್ಗೆ ಇಂಡಿಯನ್ ಕೌನ್ಸಿಲ್ ಆಫ್ ಫಾರೆಸ್ಟರಿ ಅಂಡ್ ಎಜುಕೇಷನ್, ಡೆಹರಾಡೂನ್, ಇಲ್ಲಿಗೆ ಕಳುಹಿಸಿ ಸದರಿ ಮರದ ಸ್ಯಾಂಪಲ್‌ಗಳು ತೇಗದ ಮರದಿಂದ ಮಾಡಿದವುಗಳೇ ಅಥವಾ ಅಲ್ಲವೇ ಎಂಬ ಬಗ್ಗೆ ತಜ್ಞರ ಅಭಿಪ್ರಾಯ ಕೋರಿದ್ದು, ವಿಜ್ಞಾನಿ-ಎಸ್‌ಸಿ.ವುಡ್ ಪ್ರಾಪರ್ಟೀಸ್ ಮತ್ತು ಯೂಸರ್ಸ್ ವಿಭಾಗ, ವುಡ್ ಸೈನ್ಸ್ ಮತ್ತು ಟೆಕ್ನಾಲಜಿ ಸಂಸ್ಥೆಯು ತನ್ನ 27 ಪುಟಗಳ ವಿವರವಾದ "ಐಡೆಂಟಿಫಿಕೇಷನ್" ವರದಿಯಲ್ಲಿ ಪ್ರತಿಯೊಂದು ಮರದ ಮಾದರಿಗಳನ್ನೂ ಪರೀಕ್ಷಿಸಿ ಗುರುತಿಸಲಾಗಿದ್ದು, ಕೇವಲ 155 ಮಾದರಿಗಳನ್ನು ಮಾತ್ರ ತೇಗದ ಮರದ್ದೆಂದು ಗುರ್ತಿಸಲಾಗಿದ್ದು, ಉಳಿದ ಮಾದರಿಗಳು ಬೇರೆಯವೆಂದು ಅಭಿಪ್ರಾಯ ನೀಡಿರುವುದನ್ನು ಸಹ ಸಕ್ಷಮ ಪ್ರಾಧಿಕಾರದಿಂದ ಪರಿಶೀಲಿಸಲಾಗಿದೆ.

ಐಡೆಂಟಿಫಿಕೇಷನ್ ವರದಿಯ ಪ್ರಕಾರ ಖರೀದಿಸಲಾದ 1955 ಡೆಸ್ಕ್‌ಗಳ ಪೈಕಿ ಕೇವಲ 155 ಮಾದರಿಗಳು ಮಾತ್ರ ತೇಗದ ಮರದಿಂದ ತಯಾರಿಸಿದವುಗಳಾಗಿದ್ದು ಉಳಿದ ಮಾದರಿಗಳು ತೇಗದಿಂದ ತಯಾರಿಸಿಲ್ಲದಿದ್ದು, ಬದಲಾಗಿ ವಿವಿಧ ಜಾತಿಯ ಮರ ಗಳಿಂದ ತಯಾರಿಸಲ್ಪಟ್ಟಿರುತ್ತವೆ. ಕೆ.ಎಸ್.ಐ.ಎಂ.ಸಿ. ನಿಯಮಿತದ ದರ ಪಟ್ಟಿಯ ಪ್ರಕಾರ ಪ್ರತಿಯೊಂದು ತೇಗದ ಡೆಸ್ಕಿನ ದರ ರೂ.1,700/- ಗಳಾಗಿರುತ್ತದೆ. ಅದರಂತೆ ಸರ್ಕಾರಕ್ಕೆ ಒಟ್ಟು 155 ಡೆಸ್ಕ್‌ಗಳ ದರ ರೂ.1,31,750/-ಗಳಾಗುತ್ತದೆ. ಆದರೆ ಪ್ರತಿಯೊಂದು ಮಾದರಿಯ ದರ ರೂ.850/-ಗಳಾಗಿದ್ದು, ಉಂಟಾದ ನಷ್ಟದ ವಿವರ ಈ ಕೆಳಗಿನಂತಿದೆ:-

| | | |
|---|---|---|
| ಒಟ್ಟು ಸಂದಾಯ ಮಾಡಿದ ಹಣ | : | ರೂ.39,93,792-30 |
| ತೇಗದ ಡೆಸ್ಕ್‌ಗಳ ಒಟ್ಟು ಹಣ (ಕಳೆದಾಗ) | : | ರೂ. 1,31,750-00 |
| ಸರ್ಕಾರದ ಬೊಕ್ಕಸಕ್ಕೆ ಉಂಟಾದ ಒಟ್ಟು ನಷ್ಟ | : | ರೂ.38,62,042-30 |

ಈ ಪ್ರಕರಣದಲ್ಲಿ 1ನೇ ಆರೋಪಿ ಶ್ರೀ ಅಬ್ದುಲ್ ಖಯ್ಯೂಂರವರು ತಾವು ಕಾಲೇಜು ಶಿಕ್ಷಣ ನಿರ್ದೇಶನಾಲಯದ ನಿರ್ದೇಶಕರಾಗಿದ್ದಾಗ ವಿವಿಧ ಪ್ರಥಮ ದರ್ಜೆ ಕಾಲೇಜುಗಳಿಗೆ ಕಳಪೆ ದರ್ಜೆಯ ಮರದ ಡೆಸ್ಕ್‌ಗಳನ್ನು ಖರೀದಿಸಿ, ಅವುಗಳನ್ನು ತೇಗದ ಮರದಿಂದ ಮಾಡಿದವುಗಳೆಂಬುದಾಗಿ 2ನೇ ಆರೋಪಿತರಾದ ಶ್ರೀ ಕೆ.ಎಸ್.ಶ್ರೀವತ್ಸ, ಜನರಲ್ ಮ್ಯಾನೇಜರ್, ಕೆ.ಎಸ್.ಐ.ಎಂ.ಸಿ. ರವರೊಂದಿಗೆ ಷಾಮೀಲಾಗಿ ಅವರಿಂದ ಸುಳ್ಳು ದೃಢೀಕರಣ ಪತ್ರವನ್ನು ಪಡೆದು, ಬೆಂಗಳೂರಿನ ಖಾಸಗಿ ಸಂಸ್ಥೆಗಳಾದ (1)ಮೆ/ಶ್ರೀ ಶಾಹಿ ಟ್ರೇಡರ್ಸ್, (2)ಮೆ/ಕರ್ನಾಟಕ ವುಡ್ ವರ್ಕ್ಸ್, (3)ಮೆ/ಬೆಂಗಳೂರು ಇಂಜಿನಿಯರಿಂಗ್, (4)ಮೆ/ಅಶೋಕ್ ಸ್ಟೀಲ್ ಇಂಡಸ್ಟ್ರೀಸ್ ಮತ್ತು (5)ಮೆ/ತ್ರಿವೇಣಿ ಇಂಡಸ್ಟ್ರೀಸ್ ಇವರಿಗೆ ಒಟ್ಟು ರೂ.39,93,792-30 ಪೈಸೆಗಳನ್ನು ಪಾವತಿಸಿರುವುದು ಮತ್ತು ಸದರಿ ಖಾಸಗಿ ಸಂಸ್ಥೆಗಳೊಂದಿಗೆ ಷಾಮೀಲಾಗಿ ಕಳಪೆ ಮಟ್ಟದ ಡೆಸ್ಕ್‌ಗಳನ್ನು ಖರೀದಿಸುವಲ್ಲಿ ಅವ್ಯವಹಾರವೆಸಗಿ ಸರ್ಕಾರಕ್ಕೆ ಒಟ್ಟು ರೂ.38,62,042-30 ಪೈಸೆಗಳನ್ನು ನಷ್ಟವನ್ನುಂಟು ಮಾಡಿರುವುದು ತನಿಖೆಯಿಂದ ದೃಢಪಟ್ಟಿರುವುದನ್ನು ಸಹ ಸಕ್ಷಮ ಪ್ರಾಧಿಕಾರಿಯಾದ ಸರ್ಕಾರವು ಅವಲೋಕಿಸಲಾಗಿ ಮೇಲ್ನೋಟಕ್ಕೆ ಅವ್ಯವಹಾರ ಗೋಚರವಾಗುವುದನ್ನು ಗಮನಿಸಿ ಈ ಕೃತ್ಯದಿಂದ ಲಂಚ ನಿರೋದ ಕಾಯ್ದೆ 1988ರ ಕಲಂ 7, 10 ಮತ್ತು 13(1)(ಡಿ) ಜೊತೆಗೆ 13(2) ಹಾಗೂ ಭಾರತೀಯ ದಂಡ ಸಂಹಿತೆಯ ಕಲಂ 120(ಬಿ), 409 ಮತ್ತು 420ರಡಿಯಲ್ಲಿ ಶಿಕ್ಷಾರ್ಹ ಅಪರಾಧವೆಸಗಿರುತ್ತಾರೆ ಎಂಬುದರಲ್ಲಿ ಸಂದೇಹವಿಲ್ಲವೆಂದು ತನಿಖೆಯ ವಿವರಗಳು ಮತ್ತು ಸಾಕ್ಷಾಧಾರಗಳು ಸಮರ್ಥಿಸುತ್ತವೆಂದು ಶಿಸ್ತು ಪ್ರಾಧಿಕಾರವು ತೃಪ್ತಿಗೊಂಡಿದೆ.

ಈ ಪ್ರಕರಣದಲ್ಲಿ ಒಳಗೊಂಡ ಶ್ರೀವತ್ಸ, ಹಿಂದಿನ ಜನರಲ್ ಮ್ಯಾನೇಜರ್, ಕೆ.ಎಸ್.ಐ.ಎಂ.ಸಿ. ಲಿ., ಬೆಂಗಳೂರು ಅವರ ಸೇವಾ ವಿಷಯ ವಾಣಿಜ್ಯ ಮತ್ತು ಕೈಗಾರಿಕಾ ಇಲಾಖೆಯ ಆಡಳಿತ ವ್ಯಾಪ್ತಿಗೆ ಬರುವುದರಿಂದ ಸೂಕ್ತ ಮಂಜೂರಾತಿ ನೀಡಲು ಪರಿಶೀಲಿಸಿ ಕ್ರಮ ಕೈಗೊಳ್ಳುವಂತೆ ಮೇಲೆ (3)ರಲ್ಲಿ ಓದಲಾದ ಅನಧಿಕೃತ ಟಿಪ್ಪಣಿಯಲ್ಲಿ ಶಿಕ್ಷಣ ಇಲಾಖೆಯು ವಾಣಿಜ್ಯ ಮತ್ತು ಕೈಗಾರಿಕಾ ಇಲಾಖೆಯನ್ನು ಕೋರಿರುತ್ತದೆ ಎಂಬುದನ್ನು ಗಮನಿಸಿದೆ.

ಮೇಲ್ಕಂಡ ಸನ್ನಿವೇಶಗಳಲ್ಲಿ, ಆರೋಪಿತರಾದ ಶ್ರೀ ಅಬ್ದುಲ್ ಖಯ್ಯೂಂ, ಹಿಂದಿನ ನಿರ್ದೇಶಕರು (ನಿವೃತ್ತ) ಇವರ ನಿವಾಸ ಮತ್ತು ಕಛೇರಿಗಳ ಮೇಲೆ ದಾಳಿ ನಡೆಸಿ ಜಪ್ತಿ ಮಾಡಲಾದ ಮೇಲ್ಕಂಡ ವಿವರಗಳನ್ನು, ಮರ ತಜ್ಞರ ವರದಿಯನ್ನು ಮತ್ತು ಸರ್ಕಾರಕ್ಕೆ ಉಂಟಾದ ನಷ್ಟದ ಅಂಕಿ ಅಂಶಗಳನ್ನು ಗಣನೆಗೆ ತೆಗೆದುಕೊಂಡು ಇವರನ್ನು ಭಾರತೀಯ ದಂಡ ಸಂಹಿತೆಯ ಕಲಂ 120(ಬಿ), 409, 420ರ ಪ್ರಕಾರ ಅಪರಾಧವೆಸಗಿರುವುದರಿಂದ ಇವರನ್ನು ಸಕ್ಷಮ ನ್ಯಾಯಾಲಯದಲ್ಲಿ ಲಂಚ ನಿರೋಧ ಕಾಯ್ದೆ 1988ರ ಕಲಂ 7, 10 ಮತ್ತು 13(1)(ಡಿ) ಜೊತೆಗೆ 13(2) ಹಾಗೂ ಭಾರತೀಯ ದಂಡ ಸಂಹಿತೆಯ ಕಲಂ 120(ಬಿ), 409 ಮತ್ತು 420ರ ಪ್ರಕಾರ ಸಕ್ಷಮ ನ್ಯಾಯಾಲಯದಲ್ಲಿ ಅಭಿಯೋಜನೆಗೊಳಪಡಿಸುವುದು ಅವಶ್ಯವೆಂದು ಸಕ್ಷಮ ಪ್ರಾಧಿಕಾರಿಯಾದ ಸರ್ಕಾರವು ಮನಗಂಡು ಈ ಮುಂದಿನಂತೆ ಆದೇಶಿಸುತ್ತದೆ.

ಈ ಆದೇಶವನ್ನು ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ ಸಹಿ ಮಾಡುವ ಶ್ರೀ ಕೆ. ರಘುರಾಮ್ ಭಂಡಾರಿ, ಸರ್ಕಾರದ ಅಧೀನ ಕಾರ್ಯದರ್ಶಿ, ಸಿಆಸುಇ (ಸೇವೆಗಳು-3) ಆದ ನನಗೆ ಸಕ್ಷಮ ಶಿಸ್ತು ಪ್ರಾಧಿಕಾರಿಯಿಂದ ಅಭಿಯೋಜನಾ ಮಂಜೂರಾತಿ ಆದೇಶವನ್ನು ಹೊರಡಿಸುವ ಅಧಿಕಾರವು ಕರ್ನಾಟಕ ಸರ್ಕಾರದ ಸಚಿವಾಲಯ ಕಛೇರಿ ಕೈಪಿಡಿ ನಿಯಮ 36,37 ರಂತೆ ಹಾಗೂ Karnataka Transaction of Business Rules ರೊಡನೆ ಓದಿಕೊಂಡಂತೆ ನಿಯಮ ಬದ್ಧವಾಗಿ ಪ್ರದತ್ತವಾಗುವುದರಿಂದ ಶ್ರೀ ಅಬ್ದುಲ್ ಖಯ್ಯೂಂ, ನಿವೃತ್ತ ನಿರ್ದೇಶಕರು ಲಂಚ ನಿರೋಧ ಕಾಯ್ದೆ 1988ರ ಕಲಂ 7, 10 ಮತ್ತು 13(1)(ಡಿ) ಜೊತೆಗೆ 13(2)

ಹಾಗೂ ಭಾರತೀಯ ದಂಡ ಸಂಹಿತೆಯ ಕಲಂ 120(ಬಿ), 409 ಮತ್ತು 420ರಡಿ ಅಭಿಯೋಜನೆಗೆ ಒಳಪಡಿಸಲು ಮಂಜೂರಾತಿಗೆ ಸಹಿ ಮಾಡುವ ಅಧಿಕಾರವನ್ನು ಹೊಂದಿದ್ದು ಅದರಂತೆ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 165 ಎಸ್‌ಇಎನ್ 05 ಬೆಂಗಳೂರು, ದಿನಾಂಕ: 5ನೇ ಮೇ 2006.**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳಿಂದಾಗಿ ಶ್ರೀ ಅಬ್ದುಲ್ ಖಯ್ಯೂಂ, ನಿವೃತ್ತ ನಿರ್ದೇಶಕರು, ಕಾಲೇಜು ಶಿಕ್ಷಣ ಇಲಾಖೆ, ಬೆಂಗಳೂರು ಇವರನ್ನು ಸಕ್ಷಮ ನ್ಯಾಯಾಲಯದಲ್ಲಿ ಲಂಚ ನಿರೋಧ ಕಾಯ್ದೆ 1988ರ ಕಲಂ 7, 10 ಮತ್ತು 13(1)(ಡಿ) ಜೊತೆಗೆ 13(2) ಹಾಗೂ ಭಾರತೀಯ ದಂಡ ಸಂಹಿತೆಯ ಕಲಂ 120(ಬಿ), 409 ಮತ್ತು 420ರ ಪ್ರಕಾರ ಸಕ್ಷಮ ನ್ಯಾಯಾಲಯದಲ್ಲಿ ಇವರನ್ನು ಅಭಿಯೋಜನೆಗೆ ಒಳಪಡಿಸಲು ದಂಡ ಪ್ರಕ್ರಿಯಾ ಸಂಹಿತೆ (ಸಿ.ಆರ್.ಪಿ.ಸಿ) ಕಲಂ 197ರ ಪ್ರಕಾರ ಸಕ್ಷಮ ಪ್ರಾಧಿಕಾರವು ಈ ಮೂಲಕ ಅಭಿಯೋಜನಾ ಮಂಜೂರಾತಿಯನ್ನು ನೀಡುತ್ತದೆ.

ಈ ವಿಷಯದಲ್ಲಿ ಹೊರಡಿಸಲಾದ ಸರ್ಕಾರಿ ಆದೇಶ ಸಂಖ್ಯೆ:ಸಿಆಸುಇ 65 ಎಸ್‌ಇಎನ್ 05 ದಿ:20.01.2006 ಅನ್ನು ಈ ಮೂಲಕ ರದ್ದುಗೊಳಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ರಘುರಾಮ್ ಭಂಡಾರಿ**

ಪಿ.ಆರ್. 752

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ, (ಸೇವೆಗಳು-3).

**ವಿಷಯ:** ಶ್ರೀ ಎನ್.ಎಸ್.ಸಂಗೊಳ್ಳಿ, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರಿಗೆ ವಿಚಾರಣಾ ವರದಿ ಸಲ್ಲಿಸಿದ್ದಕ್ಕಾಗಿ ಗೌರವಧನ, ವಾಹನ ಭತ್ಯೆ ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 15 ಎಸ್‌ಇಎನ್ 93 ದಿನಾಂಕ:08.02.2005.

2) ಶ್ರೀ ಎನ್.ಎಸ್.ಸಂಗೊಳ್ಳಿ, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರ ವರದಿ ದಿನಾಂಕ: 05.04.2006.

**ಪ್ರಸ್ತಾವನೆ:**

ಶ್ರೀ ಸಿ.ಎಂ.ಈಶ್ವರ್, ನಿವೃತ್ತ ಕೆಎಎಸ್ ಅಧಿಕಾರಿ ಅವರು ನಂಜನಗೂಡು ಉಪ ವಿಭಾಗಾಧಿಕಾರಿಯಾಗಿ ಕಾರ್ಯನಿರ್ವಹಿಸುತ್ತಿದ್ದಾಗ ಅಕ್ರಮ ಗಣಿಗಾರಿಕೆಯನ್ನು ತಡೆಗಟ್ಟಲು ವಿಫಲರಾದರೆನ್ನಲಾದ ಆರೋಪದ ಕುರಿತು ಅವರ ವಿರುದ್ಧ ಇಲಾಖಾ ವಿಚಾರಣೆ ನಡೆಸುವ ಸಲುವಾಗಿ ಮೇಲೆ(1) ರಲ್ಲಿ ಓದಲಾದ ದಿನಾಂಕ:08.02.2005ರ ಸರ್ಕಾರಿ ಆದೇಶದಲ್ಲಿ ಶ್ರೀ ಎನ್.ಎಸ್.ಸಂಗೊಳ್ಳಿ, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು, ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಗಿತ್ತು. ವಿಚಾರಣೆ ನಡೆಸಿದ ವಿಚಾರಣಾಧಿಕಾರಿಗಳು ಮೇಲೆ(2) ರಲ್ಲಿ ಓದಲಾದ ದಿನಾಂಕ:05.04.2006ರ ವಿಚಾರಣಾ ವರದಿಯನ್ನು ಸಲ್ಲಿಸಿರುತ್ತಾರೆ. ಈ ಸಂಬಂಧ ಅವರಿಗೆ ಗೌರವಧನ ಹಾಗೂ ವಾಹನಭತ್ಯೆ ಮಂಜೂರು ಮಾಡಲು ಸರ್ಕಾರವು ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 135 ಎಸ್‌ಇಎನ್ 06 ಬೆಂಗಳೂರು ದಿನಾಂಕ: 2ನೇ ಮೇ 2006.**

ಸರ್ಕಾರವು ಶ್ರೀ ಎನ್.ಎಸ್.ಸಂಗೊಳ್ಳಿ, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು ಇವರು ವಿಚಾರಣಾ ವರದಿ ಸಲ್ಲಿಸಿದ ಕಾರಣ ಸರ್ಕಾರಿ ಆದೇಶ ಸಂಖ್ಯೆ:ಸಿಆಸುಇ 3 ಸೇಇವಿ 96, ದಿನಾಂಕ:24.04.1998 ರನ್ವಯ ರೂ.5,000/- (ಐದು ಸಾವಿರ ರೂಪಾಯಿಗಳು ಮಾತ್ರ) ಗೌರವಧನವನ್ನು ಹಾಗೂ ಸರ್ಕಾರಿ ಆದೇಶ ಸಂಖ್ಯೆ:ಸಿಆಸುಇ 45 ಸೇಇವಿ 2001, ದಿನಾಂಕ:04.03.2002 ರನ್ವಯ ರೂ.1,000/- (ಒಂದು ಸಾವಿರ ರೂಪಾಯಿಗಳು ಮಾತ್ರ) ವಾಹನ ಭತ್ಯೆಯನ್ನು ಇವರಿಗೆ ಪಾವತಿ ಮಾಡಬೇಕೆಂದು ಈ ಮೂಲಕ ಆದೇಶಿಸುತ್ತದೆ.

ಈ ಬಗೆಗಿನ ವೆಚ್ಚವನ್ನು ಆಯವ್ಯಯದ ಲೆಕ್ಕ ಶೀರ್ಷಿಕೆ "2052 ಸಚಿವಾಲಯ ಸಾಮಾನ್ಯ ಸೇವೆಗಳು-090-ಸಚಿವಾಲಯ-01, ಕರ್ನಾಟಕ ಸರ್ಕಾರದ ಸಚಿವಾಲಯ-051 ಸಾಮಾನ್ಯ ವೆಚ್ಚಗಳು" ರಲ್ಲಿ ಭರಿಸುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ರಘುರಾಮ್ ಭಂಡಾರಿ**

ಪಿ.ಆರ್. 753

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ, (ಸೇವೆಗಳು-3).

**ವಿಷಯ:** ಶ್ರೀ ಹೆಚ್.ರಾಮಾಂಜನೇಯ, ಕೆಎಎಸ್ (ಕಿರಿಯ ಶ್ರೇಣಿ) ಅಧಿಕಾರಿ ಅವರ ವಿರುದ್ಧ ಇಲಾಖಾ ವಿಚಾರಣೆ-ದಂಡನೆ ವಿಧಿಸಿದ ಸರ್ಕಾರದ ಆದೇಶದ ವಿರುದ್ಧ ಗೌರವಾನ್ವಿತ ರಾಜ್ಯಪಾಲರಿಗೆ ಸಲ್ಲಿಸಿದ ಮೇಲ್ಮನವಿಯನ್ವಯ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 36 ಎಸ್‌ಇಎನ್ 97 ದಿನಾಂಕ: 15.12.2005.

2) ಶ್ರೀ ಹೆಚ್.ರಾಮಾಂಜನೇಯ, ಕೆಎಎಸ್ (ಕಿರಿಯ ಶ್ರೇಣಿ) ಅಧಿಕಾರಿ ಅವರ ದಿನಾಂಕ 25.2.2006ರ ಮೇಲ್ಮನವಿ.

**ಪ್ರಸ್ತಾವನೆ:**

ಶ್ರೀ ಹೆಚ್.ರಾಮಾಂಜನೇಯ, ಕೆಎಎಸ್ (ಕಿರಿಯ ಶ್ರೇಣಿ) ಅಧಿಕಾರಿ ಅವರು ಬೆಳಗಾಂ ಜಿಲ್ಲೆ ಗೋಕಾಕ್ ತಾಲ್ಲೂಕಿನ ತಹಸೀಲ್ದಾರ್‌ರಾಗಿ ಕಾರ್ಯ ನಿರ್ವಹಿಸುತ್ತಿದ್ದಾಗ ಮೂಡಲಗಿ ಗ್ರಾಮದ ಗ್ರಾಮ ಲೆಕ್ಕಿಗರವರ ಕಛೇರಿಯಲ್ಲಿ ರೂ.3,30,287/-ಗಳು ದುರುಪಯೋಗವಾದ ಆರೋಪಕ್ಕೆ ಸಂಬಂಧಿಸಿದಂತೆ ಈ ಕೆಳಕಂಡ ಅಧಿಕಾರಿ/ನೌಕರರುಗಳ ವಿರುದ್ಧ ವಿಚಾರಣೆ ನಡೆಸಲಾಯಿತು:

1) ಶ್ರೀ ವೈ.ಎಂ.ಮರಿಯಪ್ಪ, ಹಿಂದಿನ ತಹಸೀಲ್ದಾರ್, ಗೋಕಾಕ್.

2) ಶ್ರೀ ಆರ್.ವಿ.ಯಮನೂರ್, ಹಿಂದಿನ ತಹಸೀಲ್ದಾರ್, ಗೋಕಾಕ್.

3) ಶ್ರೀ ವೈ.ಎಂ.ಮ್ಯಾಗೇರಿ (ಉರ್ಫ್‌ಬಿ.ಬಿ.ಸಂಗಮೇಶ್), ಹಿಂದಿನ ತಹಸೀಲ್ದಾರ್, ಗೋಕಾಕ್.
4) ಶ್ರೀ ಹೆಚ್.ರಾಮಾಂಜನೇಯ, ಪ್ರಸ್ತುತ ಕೆಎಎಸ್ (ಕಿರಿಯ ಶ್ರೇಣಿ) ಅಧಿಕಾರಿ, ಹಿಂದಿನ ತಹಸೀಲ್ದಾರ್, ಗೋಕಾಕ್.
5) ಶ್ರೀ ಜೆ.ಬಿ.ಮರಾಠೆ, ಹಿಂದಿನ ಮೇಲ್ವಿಚಾರಕ ಶಿರಸ್ತೇದಾರ್.
6) ಶ್ರೀ ಐ.ಪಿ.ಬಸ್ತವಾಡಕರ, ಹಿಂದಿನ ಕಂದಾಯ ನಿರೀಕ್ಷಕರು.
7) ಶ್ರೀ ಎಸ್.ಎಂ.ಮಾನೆ, ಹಿಂದಿನ ಕಂದಾಯ ನಿರೀಕ್ಷಕರು.

ಮೇಲ್ಕಂಡ ಆರೋಪಿತ ಅಧಿಕಾರಿ/ನೌಕರರುಗಳ ವಿರುದ್ಧ ವಿಚಾರಣೆ ನಡೆಸಿ ಸಲ್ಲಿಸಿದ ವಿಚಾರಣಾ ವರದಿಯನ್ವಯ 7 ಜನ ಆರೋಪಿತ ಅಧಿಕಾರಿ/ನೌಕರರುಗಳ ಪೈಕಿ ಶ್ರೀ ಹೆಚ್. ರಾಮಾಂಜನೇಯ ಕೆಎಎಸ್ (ಕಿರಿಯ ಶ್ರೇಣಿ) ಅಧಿಕಾರಿ ಅವರನ್ನು ಹೊರತು ಪಡಿಸಿ ಉಳಿದ 6 ಜನ ಆರೋಪಿತ ಅಧಿಕಾರಿ/ನೌಕರರುಗಳಿಗೆ ಸಂಬಂಧಪಟ್ಟ ಶಿಸ್ತು ಪ್ರಾಧಿಕಾರವು ಕ್ರಮ ವಹಿಸಿರುತ್ತವೆ.

ಶ್ರೀ ಹೆಚ್.ರಾಮಾಂಜನೇಯ ಕೆಎಎಸ್ (ಕಿರಿಯ ಶ್ರೇಣಿ) ಅಧಿಕಾರಿ ಅವರಿಗೆ ಸಂಬಂಧಿಸಿದಂತೆ ವಿಚಾರಣಾಧಿಕಾರಿಗಳು ನೀಡಿದ ವಿಚಾರಣಾ ವರದಿಯನ್ನು ಒಪ್ಪಿಕೊಂಡು ಸಕಾಲದಲ್ಲಿ ಗ್ರಾಮ ಲೆಕ್ಕಿಗರ ವಿರುದ್ಧ ಕ್ರಮ ತೆಗೆದುಕೊಳ್ಳಲಿಲ್ಲ ಎಂಬ ಆರೋಪ ಸಾಬೀತಾದ ಕಾರಣ ಮೇಲೆ (1)ರಲ್ಲಿ ಓದಲಾದ ದಿನಾಂಕ 15.12.05ರ ಸರ್ಕಾರಿ ಆದೇಶದಲ್ಲಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 8(ii)ರನ್ವಯ ವಾಗ್ದಂಡನೆ ವಿಧಿಸಿ ಆದೇಶ ಹೊರಡಿಸಲಾಗಿತ್ತು. ಈ ಬಗ್ಗೆ ಹೆಚ್.ರಾಮಾಂಜನೇಯ ಕೆಎಎಸ್ (ಕಿರಿಯ ಶ್ರೇಣಿ) ಅಧಿಕಾರಿ ಅವರು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 18ರಡಿ ಗೌರವಾನ್ವಿತ ರಾಜ್ಯಪಾಲರಿಗೆ ಮೇಲೆ (2)ರಲ್ಲಿ ಓದಲಾದ ಮೇಲ್ಮನವಿ ಸಲ್ಲಿಸಿ ತಮ್ಮ ಮೇಲೆ ವಿಧಿಸಿದ ದಂಡನೆಯನ್ನು ರದ್ದುಗೊಳಿಸುವಂತೆ ಕೋರಿದ್ದಾರೆ. ಶ್ರೀ ಹೆಚ್.ರಾಮಾಂಜನೇಯ ಅವರ ಮೇಲ್ಮನವಿ ಮತ್ತು ತತ್ಸಂಬಂಧ ಶಿಸ್ತು ಪ್ರಾಧಿಕಾರದ ಟಿಪ್ಪಣಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರವು ಈ ಕೆಳಕಂಡಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 86 ಎಸ್‌ಇಎನ್ 2006 ಬೆಂಗಳೂರು ದಿನಾಂಕ: 18ನೇ ಮೇ 2006**

I agree with the recommendation of the Disciplinary authority. Penalty of Censure is set aside. Warning be issued to him to exercise more caution in such matters

T.N.CHATURVEDI,
GOVERNOR OF KARNATAKA.

ಮೇಲ್ಮನವಿ ಪ್ರಾಧಿಕಾರರಾದ ಗೌರವಾನ್ವಿತ ರಾಜ್ಯಪಾಲರ ಆದೇಶದನ್ವಯ ಶ್ರೀ ಹೆಚ್. ರಾಮಾಂಜನೇಯ, ಕೆಎಎಸ್, ಹಿಂದಿನ ತಹಸೀಲ್ದಾರ್, ಗೋಕಾಕ್ ತಾಲ್ಲೂಕು ಇವರಿಗೆ ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 36 ಎಸ್‌ಇಎನ್ 97 ದಿನಾಂಕ 15.12.2005 ರಲ್ಲಿ ವಿಧಿಸಿದ ವಾಗ್ದಂಡನೆಯನ್ನು ರದ್ದುಪಡಿಸಿರುವುದರಿಂದ ಈ ವಿಚಾರಣೆ ನಡೆಯದಿದ್ದಲ್ಲಿ ಅವರು ಯಾವ ಸೌಲಭ್ಯಗಳನ್ನು ಪಡೆಯಲು ಅರ್ಹರಿರುತ್ತಿದ್ದರೋ ಅವುಗಳನ್ನು ಪಡೆಯಲು ಅರ್ಹರಿರುತ್ತಾರೆ. ಶ್ರೀ ಹೆಚ್.ರಾಮಾಂಜನೇಯ, ಕೆಎಎಸ್ ಅಧಿಕಾರಿ ಇವರಿಗೆ ಇನ್ನು ಮುಂದೆ ಇಂತಹ ವಿಷಯಗಳಲ್ಲಿ ತುಂಬಾ ಜಾಗರೂಕರಾಗಿರುವಂತೆ ಸರ್ಕಾರವು ಎಚ್ಚರಿಕೆಯನ್ನು ನೀಡುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ರಘುರಾಮ್ ಭಂಡಾರಿ**

ಪಿ.ಆರ್. 795

ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ, (ಸೇವೆಗಳು-3).

ವಿಷಯ: ಬೆಂಗಳೂರಿನ ಕುಮಾರ ಕೃಪ ಅತಿಥಿ ಗೃಹದ ಅನೆಕ್ಸ್ ಕಟ್ಟಡದಲ್ಲಿ ಪಾವತಿಸುವ ಅತಿಥಿಗಳಿಂದ ಸಂಗ್ರಹವಾಗಿದ್ದ ಹಣವನ್ನು ದುರುಪಯೋಗಪಡಿಸಿಕೊಂಡಿರುವ ನೌಕರರ ವಿರುದ್ಧ ಶಿಸ್ತು ಕ್ರಮ ಕೈಗೊಳ್ಳುವ ಬಗ್ಗೆ.

ಓದಲಾಗಿದೆ:
1) ಉಪ ನಿಬಂಧಕರು, ವಿಚಾರಣೆಗಳು-೨, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ರವರ ಟಿಪ್ಪಣಿ ಸಂಖ್ಯೆ: ಲೋಕ್ಃಡಿಆರ್‌ಇ-೨ಃಇಎನ್‌ಕ್ಯೂ-೧೯ಃ೨೦೦೧-೦೨, ದಿನಾಂಕ ೨೯.೦೪.೨೦೦೩.
2) ಆಪಾದಿತ ನೌಕರರುಗಳಿಗೆ ನೀಡಿರುವ ಒಂದನೇ ಕಾರಣ ಕೇಳುವ ನೋಟೀಸ್ ಸಂಖ್ಯೆ: ಡಿಪಿಎಆರ್ ೩೪ ಹೆಚ್‌ಇಟಿ ೨೦೦೩ (ಪಿ), ದಿನಾಂಕ ೧೬.೧೦.೨೦೦೩.
3) ಸರ್ಕಾರಿ ಆದೇಶ ಸಂಖ್ಯೆ: ಡಿಪಿಎಆರ್ ೩೪ ಹೆಚ್‌ಇಟಿ ೨೦೦೩ (ಭಾಗ), ದಿನಾಂಕ ೩೧.೦೩.೨೦೦೪.
4) ಅಪರ ನಿಬಂಧಕರು, ವಿಚಾರಣೆಗಳು-೧, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ರವರ ಪತ್ರ ಸಂಖ್ಯೆ: ಲೋಕ್ಃಎಆರ್‌ಇ-೧ಃಇಎನ್‌ಕ್ಯೂ-೧ಃ೨೦೦೪-೦೫, ದಿನಾಂಕ ೩೧.೦೫.೨೦೦೫.
5) ಆಪಾದಿತ ನೌಕರರುಗಳಿಗೆ ನೀಡಿರುವ ಎರಡನೇ ಕಾರಣ ಕೇಳುವ ನೋಟೀಸ್ ಸಂಖ್ಯೆ: ಡಿಪಿಎಆರ್ ೩೪ ಹೆಚ್‌ಇಟಿ ೨೦೦೩ (ಪಿ), ದಿನಾಂಕ ೧೮.೦೪.೨೦೦೬.
6) ಆಪಾದಿತ ನೌಕರರು ನೀಡಿರುವ ಲಿಖಿತ ಹೇಳಿಕೆಗಳನ್ನು ಕುಮಾರ ಕೃಪ ಅತಿಥಿ ಗೃಹದ ವಿಶೇಷಾಧಿಕಾರಿಯವರು ಸರ್ಕಾರಕ್ಕೆ ಸಲ್ಲಿಸಿರುವ ದಿನಾಂಕ ೦೨.೦೫.೨೦೦೬.

ಪ್ರಸ್ತಾವನೆ:

ಉಪ ನಿಬಂಧಕರು, ವಿಚಾರಣೆಗಳು-೧, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ರವರು ಮೇಲೆ ಓದಲಾದ ಕ್ರಮ ಸಂಖ್ಯೆ (೧) ರಲ್ಲಿನ ದಿನಾಂಕ ೨೯.೦೪.೨೦೦೩ ರ ಪತ್ರದಲ್ಲಿ ಕುಮಾರ ಕೃಪ ಅತಿಥಿ ಗೃಹದಲ್ಲಿನ ಅನೆಕ್ಸ್ ಕಟ್ಟಡದಲ್ಲಿ ಪಾವತಿಸುವ ಅತಿಥಿಗಳಿಂದ ದಿನಾಂಕ ೨೬.೦೭.೧೯೯೭ ರಿಂದ ೨೨.೦೭.೧೯೯೮ ರವರೆಗೆ ಸಂಗ್ರಹವಾಗಿದ್ದ ಹಣ ರೂ. ೩,೫೭,೩೬೦.೦೦ ಗಳನ್ನು ದುರುಪಯೋಗಪಡಿಸಿಕೊಂಡಿರುವ ಅತಿಥಿ ಗೃಹದ ಅಧಿಕಾರಿ:ನೌಕರರ ವಿರುದ್ಧ ವಿಚಾರಣೆ ಮಾಡಿ ಸಲ್ಲಿಸಿರುವ ವಿಚಾರಣಾ ವರದಿಯಲ್ಲಿ ಕುಮಾರ ಕೃಪ ಅತಿಥಿ ಗೃಹದ ಈ ಕೆಳಕಂಡ ನೌಕರರು ಸಹಾ ಹಣ ದುರುಪಯೋಗದಲ್ಲಿ ಭಾಗಿಯಾಗಿರುವುದು ಕಂಡು ಬಂದಿದೆಯೆಂದು ಸ್ಪಷ್ಟಪಡಿಸಿದ್ದರ ಹಿನ್ನೆಲೆಯಲ್ಲಿ, ಅವರುಗಳ ವಿರುದ್ಧ ವಿಚಾರಣೆ ಮಾಡಲು ಸರ್ಕಾರವು ನಿರ್ಧರಿಸಿ, ಈ ಆರೋಪಿತ

ನೌಕರರಿಗೆ ಮೇಲೆ ಓದಲಾದ ಕ್ರಮ ಸಂಖ್ಯೆ (೨) ರಲ್ಲಿನ ದಿನಾಂಕ ೧೬.೧೦.೨೦೦೩ ರಲ್ಲಿ ದೋಷಾರೋಪಣಾ ಪಟ್ಟಿಯೊಂದಿಗೆ ಒಂದನೇ ಕಾರಣ ಕೇಳುವ ನೋಟೀಸ್‌ಗಳನ್ನು ಜಾರಿ ಮಾಡಿ, ಆರೋಪಗಳ ಬಗ್ಗೆ ರಕ್ಷಣಾ ಹೇಳಿಕೆಗಳನ್ನು ನೀಡಲು ಕಾಲಾವಕಾಶ ನೀಡಲಾಗಿತ್ತು:-

(೧) ಶ್ರೀ ಎಸ್. ಪಾರ್ಥಸಾರಥಿ, ಅಂದಿನ ಲೆಕ್ಕ ಅಧೀಕ್ಷಕರು

(೨) ಶ್ರೀ ಫೈಸಲ್ ಅಬ್ಬಾಸ್, ದ್ವಿತೀಯ ದರ್ಜೆ ಸಹಾಯಕರು ಹಾಗೂ ಸ್ವಾಗತಕಾರರು

(೩) ಶ್ರೀ ಹೆಚ್. ಗಂಗಹನುಮಯ್ಯ, ದ್ವಿತೀಯ ದರ್ಜೆ ಸಹಾಯಕರು ಹಾಗೂ ಸ್ವಾಗತಕಾರರು

(೪) ಶ್ರೀ ಎನ್. ಆನಂದ್, ಬಟ್ಲರ್ ಗ್ರೇಡ್-೧.

ಮೇಲ್ಕಂಡ ಆರೋಪಿತ ನೌಕರರು ಲಿಖಿತ ಹೇಳಿಕೆಗಳನ್ನು ಸಲ್ಲಿಸಿ, ಎಲ್ಲಾ ಆರೋಪಗಳನ್ನು ಅಲ್ಲಗಳೆದಿರುತ್ತಾರೆ. ಆದ್ದರಿಂದ, ಜಂಟಿ ವಿಚಾರಣೆಯನ್ನು ನಡೆಸುವುದು ಸೂಕ್ತವೆಂದು ಸರ್ಕಾರವು ತೀರ್ಮಾನಿಸಿ, ೧೯೫೭ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಯ ನಿಯಮ ೧೧ ಹಾಗೂ ೧೩ ರನ್ವಯ ಕರ್ನಾಟಕ ಲೋಕಾಯುಕ್ತದ ಅಪರ ನಿಬಂಧಕರು, ವಿಚಾರಣೆಗಳು-೧ ರವರನ್ನು ವಿಚಾರಣಾಧಿಕಾರಿಯನ್ನಾಗಿ ಮೇಲೆ ಓದಲಾದ ಕ್ರಮ ಸಂಖ್ಯೆ (೩) ರಲ್ಲಿನ ದಿನಾಂಕ ೩೧.೦೩.೨೦೦೪ರ ಆದೇಶದಲ್ಲಿ ನೇಮಕ ಮಾಡಲಾಗಿತ್ತು.

ಅಪರ ನಿಬಂಧಕರು, ವಿಚಾರಣೆಗಳು-೧, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ರವರು ಮೇಲೆ ಓದಲಾದ ಕ್ರಮ ಸಂಖ್ಯೆ (೪) ರಲ್ಲಿನ ದಿನಾಂಕ ೩೧.೦೫.೨೦೦೫ರ ಪತ್ರದೊಂದಿಗೆ ವಿಚಾರಣಾ ವರದಿಯನ್ನು ಸಲ್ಲಿಸಿರುತ್ತಾರೆ. ಸದರಿ ವಿಚಾರಣಾ ವರದಿಯಲ್ಲಿ ಒಂದನೇ ಆಪಾದಿತ ನೌಕರರಾದ ಶ್ರೀ ಎಸ್. ಪಾರ್ಥಸಾರಥಿ, ಅಂದಿನ ಲೆಕ್ಕ ಅಧೀಕ್ಷಕರು, ಇವರ ವಿರುದ್ಧ ಮಾಡಲಾದ ಆಪಾದನೆಗಳು ಸಾಬೀತಾಗಿರುವುದಿಲ್ಲವೆಂದೂ, ಮೂರನೇ ಆಪಾದಿತ ನೌಕರರಾದ ಶ್ರೀ ಹೆಚ್. ಗಂಗಹನುಮಯ್ಯ, ದ್ವಿತೀಯ ದರ್ಜೆ ಸಹಾಯಕರು ಹಾಗೂ ಸ್ವಾಗತಕಾರರು, ಇವರು ದಿನಾಂಕ ೨೪.೦೪.೨೦೦೫ ರಂದು ನಿಧನರಾದ ಪ್ರಯುಕ್ತ ಅವರ ವಿರುದ್ಧ ಇಲಾಖಾ ವಿಚಾರಣೆಯನ್ನು ಕೈಬಿಡಲಾಗಿದೆ. ಉಳಿದ ಆಪಾದಿತ ನೌಕರರುಗಳ ವಿರುದ್ಧ ಮಾಡಲಾದ ಆಪಾದನೆಗಳು ಸಾಬೀತಾಗಿದೆಯೆಂದು ತಿಳಿಸಿರುತ್ತಾರೆ. ಈ ಹಿನ್ನೆಲೆಯಲ್ಲಿ, ಮೊದಲನೇ ಆಪಾದಿತ ನೌಕರರನ್ನು ಹೊರತುಪಡಿಸಿ, ಉಳಿದಂತೆ ಎರಡನೇ ಆಪಾದಿತ ನೌಕರರಾದ ಶ್ರೀ ಫೈಸಲ್ ಅಬ್ಬಾಸ್, ದ್ವಿತೀಯ ದರ್ಜೆ ಸಹಾಯಕರು ಹಾಗೂ ಸ್ವಾಗತಕಾರರು ಮತ್ತು ನಾಲ್ಕನೇ ಆಪಾದಿತ ನೌಕರರಾದ ಶ್ರೀ ಎನ್. ಆನಂದ್, ಬಟ್ಲರ್ ಗ್ರೇಡ್-೧, ಇವರುಗಳಿಗೆ ವಿಚಾರಣಾ ವರದಿಯೊಂದಿಗೆ ಎರಡನೇ ಕಾರಣ ಕೇಳುವ ನೋಟೀಸ್‌ಗಳನ್ನು ಮೇಲೆ ಓದಲಾದ ಕ್ರಮ ಸಂಖ್ಯೆ (೫) ರಲ್ಲಿನ ದಿನಾಂಕ ೧೮.೦೪.೨೦೦೬ ರಲ್ಲಿ ಜಾರಿಗೊಳಿಸಿ, ಆರೋಪಗಳ ಬಗ್ಗೆ ರಕ್ಷಣಾ ಹೇಳಿಕೆಗಳನ್ನು ನೀಡಲು ೧೫ (ಹದಿನೈದು) ದಿನಗಳ ಕಾಲಾವಕಾಶವನ್ನು ನೀಡಲಾಗಿತ್ತು. ಅದರಂತೆ, ಆರೋಪಿತ ನೌಕರರು ಲಿಖಿತ ಹೇಳಿಕೆಗಳನ್ನು ನಿಗದಿತ ಅವಧಿಯೊಳಗೆ ಸಲ್ಲಿಸಿದ್ದು, ಮೇಲೆ ಓದಲಾದ ಕ್ರಮ ಸಂಖ್ಯೆ (೬) ರಲ್ಲಿನ ದಿನಾಂಕ ೦೨.೦೫.೨೦೦೬ರ ಪತ್ರದೊಂದಿಗೆ ವಿಶೇಷಾಧಿಕಾರಿಗಳು, ಕುಮಾರ ಕೃಪ ಅತಿಥಿ ಗೃಹ, ಬೆಂಗಳೂರು ರವರು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ.

ಎರಡನೇ ಆಪಾದಿತ ನೌಕರರಾದ ಶ್ರೀ ಫೈಸಲ್ ಅಬ್ಬಾಸ್ ರವರು ದಿನಾಂಕ ೨೯.೦೪.೨೦೦೩ ರಂದು ವಿಚಾರಣಾಧಿಕಾರಿಯವರು ನೀಡಲಾದ ವರದಿಯ ಹಿನ್ನೆಲೆಯಲ್ಲಿ, ವಿಚಾರಣೆಗೆ ಒಳಪಡಿಸಿರುವುದು ಸರಿಯಾದ ಕ್ರಮವಲ್ಲವೆಂದೂ ಹಾಗೂ ತನಗೆ ಶಿಷ್ಟಾಚಾರದ ಕಾರ್ಯಗಳನ್ನು ನಿರ್ವಹಿಸಲು ಸೂಚಿಸಿದ್ದು, ಸ್ವಾಗತಕಾರರು ಗೈರುಹಾಜರಾದ ಸಂದರ್ಭದಲ್ಲಿ ತನ್ನನ್ನು ಪ್ರಭಾರ ಸ್ವಾಗತಕಾರರಾಗಿ ಕಾರ್ಯನಿರ್ವಹಿಸಲು ತಿಳಿಸಿದ್ದು, ಈ ಅವಧಿಯಲ್ಲಿ ಅತಿಥಿಗಳಿಂದ ಪಾವತಿಸಲಾದ ಹಣವನ್ನು ರೆಗ್ಯೂಲರ್ ಸ್ವಾಗತಕಾರರಾದ ಶ್ರೀ ಜೆ. ನಂಜುಂಡಸ್ವಾಮಿಯವರಿಗೆ ನೀಡಿರುವ ಅಂಶವನ್ನು ಪರಿಗಣನೆಗೆ ವಿಚಾರಣಾಧಿಕಾರಿಯವರು ತೆಗೆದುಕೊಂಡಿಲ್ಲವೆಂದು ಆರೋಪಿಸುತ್ತಾ, ಈ ಹಣ ದುರುಪಯೋಗಕ್ಕೆ ತಾನು ಕಾರಣವಲ್ಲವೆಂದೂ ತಿಳಿಸಿದ್ದಾರೆ. ಸದರಿ ನೌಕರರು ಕುಮಾರ ಕೃಪ ಅತಿಥಿ ಗೃಹದ ಅನೆಕ್ಸ್ ಕಟ್ಟಡದಲ್ಲಿ ಸ್ವಾಗತಕಾರರಾಗಿ ಕಾರ್ಯನಿರ್ವಹಿಸುತ್ತಿದ್ದಾಗ, ಅತಿಥಿ ಗೃಹದ ಅನೆಕ್ಸ್ ಕಟ್ಟಡದಲ್ಲಿ ಅತಿಥಿಗಳಿಂದ ದಿನಾಂಕ ೨೬.೦೭.೧೯೯೭ ರಿಂದ ೨೨.೦೭.೧೯೯೮ ರವರೆಗೆ ಬಾಡಿಗೆ ರೂಪದಲ್ಲಿ ಪಾವತಿಸಲಾದ ರೂ. ೨೩,೪೧೮.೦೦ (ಇಪ್ಪತ್ತ ಮೂರು ಸಾವಿರದ ನಾಲ್ಕು ನೂರ ಹದಿನೆಂಟು ರೂಪಾಯಿಗಳು ಮಾತ್ರ) ಗಳನ್ನು ಸರ್ಕಾರದ ಲೆಕ್ಕಕ್ಕೆ ಜಮಾ ಮಾಡದೇ ಸರ್ಕಾರದ ರಾಜಸ್ವವನ್ನು ನಷ್ಟವುಂಟು ಮಾಡಿ ದುರುಪಯೋಗಪಡಿಸಿಕೊಂಡಿರುವ ಆಪಾದನೆ ಸಾಬೀತಾಗಿದೆಯೆಂದು ವಿಚಾರಣಾಧಿಕಾರಿಯವರು ವರದಿಯಲ್ಲಿ ತಿಳಿಸಿರುತ್ತಾರೆ. ಆದ್ದರಿಂದ, ಆರೋಪ ಸಾಬೀತಾಗಿದೆ.

ನಾಲ್ಕನೇ ಆಪಾದಿತ ನೌಕರರಾದ ಶ್ರೀ ಎನ್. ಆನಂದ್ ರವರು ಕುಮಾರ ಕೃಪ ಅತಿಥಿ ಗೃಹದ ಅನೆಕ್ಸ್ ಕಟ್ಟಡದಲ್ಲಿ ಬಟ್ಲರ್ ಗ್ರೇಡ್-೧ ಆಗಿ ಕಾರ್ಯನಿರ್ವಹಿಸುತ್ತಿದ್ದು, ಅನೆಕ್ಸ್ ಕಟ್ಟಡದಲ್ಲಿ ಸ್ವಾಗತಕಾರರಾಗಿ ಕಾರ್ಯನಿರ್ವಹಿಸುತ್ತಿದ್ದ ಶ್ರೀ ಜೆ. ನಂಜುಂಡಸ್ವಾಮಿ ರವರು ರಜೆ ಮತ್ತು ಇನ್ನಿತರ ಕಾರಣಗಳಿಂದ ಕಛೇರಿಗೆ ಗೈರುಹಾಜರಾದ ಸಂದರ್ಭದಲ್ಲಿ ಮೇಲಾಧಿಕಾರಿಗಳ ಸೂಚನೆ ಮೇರೆಗೆ ಅತಿಥಿಗಳಿಂದ ಹಣವನ್ನು ಸಂಗ್ರಹಿಸಿ, ಸ್ವಾಗತಕಾರರು ಕರ್ತವ್ಯಕ್ಕೆ ಹಾಜರಾದ ತಕ್ಷಣ ರಶೀದಿ ಪುಸ್ತಕದೊಂದಿಗೆ ಸಂಗ್ರಹಿಸಲಾದ ಮೊತ್ತವನ್ನು ಅವರಿಗೆ ನೀಡಿರುತ್ತೇನೆ. ಗ್ರೂಪ್-ಡಿ ನೌಕರನಾದ ತನಗೆ ಕ್ಯಾಷಿಯರ್‌ಗಾಗಲೀ ಅಥವಾ ಖಜಾನೆಗಾಗಲೀ ಪಾವತಿಸಲು ಯಾವುದೇ ಅಧಿಕಾರವಿರುವುದಿಲ್ಲ. ಹಣವನ್ನು ಖಜಾನೆಗೆ ಪಾವತಿಸಿರುವುದಿಲ್ಲವೆಂಬ ಕಾರಣದ ಮೇಲೆ ಆರೋಪ ಸಾಬೀತಾಗಿದೆಯೆಂದು ನಿರ್ಣಯಿಸಿರುವುದು ಸರಿಯಿರುವುದಿಲ್ಲ. ಆದ್ದರಿಂದ, ಈ ಆರೋಪದಿಂದ ಮುಕ್ತಗೊಳಿಸುವಂತೆ ಕೋರಿರುತ್ತಾರೆ. ಸದರಿ ನೌಕರರು ಅನೆಕ್ಸ್ ಕಟ್ಟಡದಲ್ಲಿ ದಿನಾಂಕ ೨೬.೦೭.೧೯೯೭ ರಿಂದ ೨೨.೦೭.೧೯೯೮ ರವರೆಗೆ ಬಾಡಿಗೆ ರೂಪದಲ್ಲಿ ಪಾವತಿಸಲಾದ ರೂ. ೬,೩೨೯.೦೦ (ಆರು ಸಾವಿರದ ಮೂರು ನೂರ ಇಪ್ಪತ್ತೊಂಭತ್ತು ರೂಪಾಯಿಗಳು ಮಾತ್ರ) ಗಳನ್ನು ಸರ್ಕಾರದ ಲೆಕ್ಕಕ್ಕೆ ಜಮಾ ಮಾಡದೇ ಸರ್ಕಾರದ ರಾಜಸ್ವವನ್ನು ನಷ್ಟವುಂಟು ಮಾಡಿ ದುರುಪಯೋಗಪಡಿಸಿಕೊಂಡಿರುವ ಆಪಾದನೆ ಸಾಬೀತಾಗಿದೆಯೆಂದು ವಿಚಾರಣಾಧಿಕಾರಿಯವರು ವರದಿಯಲ್ಲಿ ತಿಳಿಸಿರುತ್ತಾರೆ. ಆದ್ದರಿಂದ, ಆರೋಪ ಸಾಬೀತಾಗಿದೆ.

ಕರ್ನಾಟಕ ಲೋಕಾಯುಕ್ತದ ಅಪರ ನಿಬಂಧಕರು, ವಿಚಾರಣೆಗಳು-೧ ರವರು ಸರ್ಕಾರಕ್ಕೆ ಸಲ್ಲಿಸಿರುವ ವಿಚಾರಣಾ ವರದಿಯನ್ನು ಮತ್ತು ಆರೋಪಿತ ನೌಕರರು ನೀಡಿರುವ ಲಿಖಿತ ಹೇಳಿಕೆಗಳನ್ನು ಪರಿಶೀಲಿಸಿದ ನಂತರ ಸರ್ಕಾರವು ಕೆಳಕಂಡಂತೆ ಆದೇಶ ಹೊರಡಿಸಿದೆ.

ಸರ್ಕಾರದ ಆದೇಶ ಸಂಖ್ಯೆ: ಡಿಪಿಎಆರ್ ೩೪ ಹೆಚ್‌ಇಟಿ ೨೦೦೩ (ಭಾಗ), ಬೆಂಗಳೂರು, ದಿನಾಂಕ: ೧೯್ಞಬ ಣ್ಯೆಬಬ ೨೦೦೬

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಒಂದನೇ ಆಪಾದಿತ ನೌಕರರಾದ ಶ್ರೀ ಎಸ್. ಪಾರ್ಥಸಾರಥಿ, ಅಂದಿನ ಲೆಕ್ಕ ಅಧೀಕ್ಷಕರು, ಇವರ ವಿರುದ್ಧ ಮಾಡಲಾದ ಆರೋಪ ಸಾಬೀತಾಗಿಲ್ಲವೆಂದು ವಿಚಾರಣಾಧಿಕಾರಿಗಳು ಅಭಿಪ್ರಾಯಪಟ್ಟಿರುವುದನ್ನು ಸರ್ಕಾರವು ಪರಿಗಣಿಸಿ, ಸದರಿಯವರನ್ನು ಆರೋಪಮುಕ್ತಗೊಳಿಸಿದೆ.

೨. ಮೂರನೇ ಆಪಾದಿತ ನೌಕರರಾದ ಶ್ರೀ ಗಂಗಹನುಮಯ್ಯ, ದ್ವಿತೀಯ ದರ್ಜೆ ಸಹಾಯಕರು ಹಾಗೂ ಸ್ವಾಗತಕಾರರು, ಇವರು ನಿಧನರಾದ ಪ್ರಯುಕ್ತ ಅವರ ವಿರುದ್ಧ ಹೂಡಲಾದ ವಿಚಾರಣೆಯನ್ನು ಕೈಬಿಡಲಾಗಿದೆಯೆಂದು ವಿಚಾರಣಾಧಿಕಾರಿಗಳು ವರದಿ ಮಾಡಿರುವುದನ್ನು ಸರ್ಕಾರವು ಸ್ಥಿರೀಕರಿಸಿದೆ.

೩. ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ, ೧೯೫೭ರ ನಿಯಮ ೮ (iii) ರನ್ವಯ ಶ್ರೀ ಫೈಸಲ್ ಅಬ್ಬಾಸ್, ದ್ವಿತೀಯ ದರ್ಜೆ ಸಹಾಯಕರು ಹಾಗೂ ಸ್ವಾಗತಕಾರರು, ಇವರಿಗೆ ನೀಡಬೇಕಾಗಿರುವ ಮುಂದಿನ ವಾರ್ಷಿಕ ವೇತನ ಬಡ್ತಿಯ ದಿನಾಂಕದಿಂದ ಎರಡು ವಾರ್ಷಿಕ ವೇತನ ಬಡ್ತಿಗಳನ್ನು ಸಂಚಿತ ಪರಿಣಾಮ ಬೀರದಂತೆ (without cumulative effect) ತಡೆಹಿಡಿಯುವ ದಂಡನೆಯನ್ನು ವಿಧಿಸಿ ಆದೇಶಿಸಿದೆ. ಸದರಿ ಆಪಾದಿತರಿಂದ ಸರ್ಕಾರಕ್ಕೆ ಆಗಿರುವ ಒಟ್ಟು ನಷ್ಟ ರೂ. ೨೩,೪೧೮.೦೦ (ಇಪ್ಪತ್ತ ಮೂರು ಸಾವಿರದ ನಾಲ್ಕು ನೂರ ಹದಿನೆಂಟು ರೂಪಾಯಿಗಳು ಮಾತ್ರ) ಗಳನ್ನು ಅವರ ವೇತನದಿಂದ ನಿಯಮಾನುಸಾರ ಕಟಾಯಿಸಿ, ಸರ್ಕಾರಕ್ಕೆ ಜಮಾ ಮಾಡಲು ಆದೇಶಿಸಿದೆ.

೪. ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ, ೧೯೫೭ರ ನಿಯಮ ೮ (iii) ರನ್ವಯ ಶ್ರೀ ಎನ್. ಆನಂದ್, ಬಟ್ಲರ್ ಗ್ರೇಡ್-೧, ಇವರಿಗೆ ನೀಡಬೇಕಾಗಿರುವ ಮುಂದಿನ ವಾರ್ಷಿಕ ವೇತನ ಬಡ್ತಿಯ ದಿನಾಂಕದಿಂದ ಒಂದು ವಾರ್ಷಿಕ ವೇತನ ಬಡ್ತಿಯನ್ನು ಸಂಚಿತ ಪರಿಣಾಮ ಬೀರದಂತೆ (without cumulative effect) ತಡೆಹಿಡಿಯುವ ದಂಡನೆಯನ್ನು ವಿಧಿಸಿ ಆದೇಶಿಸಿದೆ. ಸದರಿ ಆಪಾದಿತರಿಂದ ಸರ್ಕಾರಕ್ಕೆ ಆಗಿರುವ ಒಟ್ಟು ನಷ್ಟ ರೂ. ೬,೩೨೯.೦೦ (ಆರು ಸಾವಿರದ ಮೂರು ನೂರ ಇಪ್ಪತ್ತೊಂಭತ್ತು ರೂಪಾಯಿಗಳು ಮಾತ್ರ) ಗಳನ್ನು ಅವರ ವೇತನದಿಂದ ನಿಯಮಾನುಸಾರ ಕಟಾಯಿಸಿ, ಸರ್ಕಾರಕ್ಕೆ ಜಮಾ ಮಾಡಲು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
ಎನ್.ಆರ್. ಸುಧಾಕರ್
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ರಾಜ್ಯ ಶಿಷ್ಟಾಚಾರ).

ಪಿ.ಆರ್. 794

## HEALTH & FAMILY WELFARE SECRETARIAT

**Subject:** Constitution of University Review Commission for Amendment of Rajiv Gandhi University of Health Sciences Act, 1994

**Read:** 1) Letter No. GS6 GUM 2005 dated 11.04.2005 from The Under Secretary to Governor, Raj Bhavan, Bangalore

2) Letter No. REG/GEN/88/2005-06 dated 23.12.2005 from the Registrar, Rajiv Gandhi University of Health Sciences

**PREAMBLE**:

Karnataka State Universities Act 2000 provide for appointment of a review commission once in a five year to review the working of the Universities in Section 71 of the Act. This Act does not contain the provisions of review in the functioning of Universities covering all aspect of academic, administrative matters etc., As has been observed by his Excellency the Governor of Karnataka, it is felt necessary to have review commission on the lines of KSU Act 2000 and accordingly directed Government to take action regarding constitution of the review commission in the letter read act(1) above .

In the reference read at (2) above the Registrar, RGUHS has proposed panel of names for constituting committee called University Review Commission to examine the present structural setup of the university and suggest amendments to the existing provisions. Government throughly examined the above proposal and hence the following Order.

**GOVERNMENT ORDER NO. HFW 15 RGU 2005, BANGALORE, DATED: 21st April 2006**

After considering all aspects of the matter Government hereby constitute a committee to examine the present structural setup of the university and suggest amendments to the existing provisions to secure more responsiveness to the present needs consisting the following members.

(1) Dr. S. Chandrashekhar Shetty, -- Chairman
Rtd. Vice Chancellor of RGUHS

(2) Dr. Sri. C.M. Gurumurthy, -- Member
Former Special Officer for establishment of RGUHS,
Former Senate, Syndicate Member and present Chairman.
Task Force Committee for study & establishment of Colleges
Bangalore teaching Paramedical Colleges

(3) Dr. K.S. Nagesh, -- Member
Former Senate, Syndicate Member
RGUHS BDS Chairman in Dentistry(PG)
and Principal, R.V. Dental College
24th main, I Phase, J.P.Nagar, Bangalore - 78

(4) Dr. K.P. Putturaya -- Member
Consultant Research & Development
RGUHS, Bangalore

(5) Professor S.R. Kanakaraj -- Member Secretary
Former Registrar of RGUHS, Bangalore

The Committee shall;

(1) examine the present structural setup of the University
(2) suggest to make amendments to provisions of the existing Act
(3) also to suggest and recommend for inclusion of new provisions in the Act for setting up of Review Commission to review the functioning of the university periodically etc.,

The University shall provide all facilities regarding accommodation, secretarial assistance, etc., to the committee. Sitting fees and TA to the Members and other incidental charges shall be borne by the University. The committee shall submit its report to the Government within 3 months time.

By Order and in the name of the Governor of Karnataka,

**D.B. GANACHARI**

P.R. 812

Under Secretary to Government,
Health & Family Welfare Department (Medical Education).

**ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ**

**ವಿಷಯ:** ನಗರಾಭಿವೃದ್ಧಿ ಇಲಾಖೆಯ ಯೋಜನಾ ಮೇಲ್ವಿಚಾರಣಾ ಕೋಶವನ್ನು ಪೂರಕ ಸಿಬ್ಬಂದಿ ಹುದ್ದೆಗಳೊಂದಿಗೆ ಮುಂದುವರೆಸುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 21 ಸಸಿವಿ 2002 ದಿನಾಂಕ: 20.4.2002.
2) ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 76 ಸಸಿವಿ 2004 ದಿನಾಂಕ: 4.3.2005.
3) ಅನಧಿಕೃತ ಟಿಪ್ಪಣಿ ಸಂಖ್ಯೆ: ನಅಇ 176 ಪಿಆರ್‌ಜೆ 2005 ದಿನಾಂಕ: 7.1.2006.

**ಪ್ರಸ್ತಾವನೆ:**

ಮೇಲೆ (1) ರಲ್ಲಿ ಓದಲಾಗಿರುವ ಸರ್ಕಾರಿ ಆದೇಶದಲ್ಲಿ ನಗರ ಪ್ರದೇಶಗಳ ಮೂಲಭೂತ ಸೌಕರ್ಯಗಳ ಅಭಿವೃದ್ಧಿಗಾಗಿ ಜಾರಿಗೊಳಿಸುತ್ತಿರುವ ಅನೇಕ ಯೋಜನೆಗಳ ಕೆಲಸ ಕಾರ್ಯಗಳ ಮೇಲ್ವಿಚಾರಣೆ ಮತ್ತು ಸಂಘಟನೆ ನಿರ್ವಹಿಸಲು ಒಂದು ಮೇಲ್ವಿಚಾರಣಾ ಕೋಶವನ್ನು ಕೆಳಕಂಡ ಹುದ್ದೆಗಳೊಂದಿಗೆ ತಾತ್ಕಾಲಿಕವಾಗಿ ಸೃಜಿಸಲಾಗಿದೆ.

| ಕ್ರ.ಸಂ. | ಹುದ್ದೆ | ಸಂಖ್ಯೆ |
|---|---|---|
| 1. | ನಿರ್ದೇಶಕರು, ಯೋಜನಾ ಕೋಶ ಮತ್ತು ಪದನಿಮಿತ್ತ ಹೆಚ್ಚುವರಿ ಸಹ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ | 01 |
| 2. | ಸರ್ಕಾರದ ಅಧೀನ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ | 01 |
| 3. | ಶಾಖಾಧಿಕಾರಿ | 01 |
| 4. | ಹಿರಿಯ ಸಹಾಯಕರು | 01 |
| 5. | ಸಹಾಯಕರು | 02 |
| 6. | ಕಿರಿಯ ಸಹಾಯಕರು | 02 |
| 7. | ಶೀಘ್ರಲಿಪಿಗಾರರು | 02 |
| 8. | ಬೆರಳಚ್ಚುಗಾರರು | 01 |

ಮೇಲೆ (2)ರಲ್ಲಿ ಓದಲಾಗಿರುವ ಸರ್ಕಾರದ ಆದೇಶದಲ್ಲಿ ನಗರಾಭಿವೃದ್ಧಿ ಈ ಎಲ್ಲಾ ಹುದ್ದೆಗಳನ್ನು ಮುಂದುವರೆಸಲಾಗಿದೆ. ಹಾಗೂ ಪೌರಾಡಳಿತ ಸುಧಾರಣಾ ಕೋಶದ ಹುದ್ದೆಗಳನ್ನು ರದ್ದುಪಡಿಸಲಾಗಿದೆ.

ಅನಧಿಕೃತ ಟಿಪ್ಪಣಿ ಸಂಖ್ಯೆ: ನಅಇ 176 ಪಿಆರ್‌ಜೆ 2005 ದಿನಾಂಕ: 7.1.2006 ರಲ್ಲಿ ನಗರಾಭಿವೃದ್ಧಿ ಇಲಾಖೆಯ ಯೋಜನಾ ಮೇಲ್ವಿಚಾರಣಾ ಕೋಶವನ್ನು ದಿನಾಂಕ: 1.1.2006 ರಿಂದ ಒಂದು ವರ್ಷದ ಅವಧಿಗೆ ಪೂರಕ ಸಿಬ್ಬಂದಿ ಹುದ್ದೆಗಳೊಂದಿಗೆ ಮುಂದುವರೆಸಲು ಕೋರಿಕೆ ಇದೆ. ಪ್ರಸ್ತಾವನೆಯನ್ನು ಪರಿಶೀಲಿಸಿ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 95 ಸಸಿವಿ 2005, ಬೆಂಗಳೂರು, ದಿನಾಂಕ: 17ನೇ ಮೇ 2006.**

ಪ್ರಸ್ತಾವನೆಯಲ್ಲಿ ವಿವರಿಸಿದ ಹಿನ್ನೆಲೆಯಲ್ಲಿ ಕರ್ನಾಟಕ ಸರ್ಕಾರ ಸಚಿವಾಲಯದ ನಗರಾಭಿವೃದ್ಧಿ ಇಲಾಖೆಯ ಯೋಜನಾ ಮೇಲ್ವಿಚಾರಣಾ ಕೋಶವನ್ನು ಪ್ರಸ್ತಾವನೆಯಲ್ಲಿ ನಮೂದಿಸಿದ 11 ಹುದ್ದೆಗಳೊಂದಿಗೆ ದಿನಾಂಕ: 1.1.2006 ರಿಂದ ಒಂದು ವರ್ಷದವರೆಗೆ ತಾತ್ಕಾಲಿಕವಾಗಿ ಮುಂದುವರೆಸಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಆಇ 1 ಟಿಎಫ್‌ಪಿ 96, ದಿನಾಂಕ: 10.9.1996 ರನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಯು.ಪಿ. ಪ್ರಭು**

ಪಿ.ಆರ್. 815

ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–2).